ನೆಹರೂ ಬಾಲ ಪುಸ್ತಕಾಲಯ

# ಎಲ್ಲಾ ಕಾಲಕ್ಕೂ ಬರುವ ಕಥೆಗಳು

ಶಾಂತಾ ರಂಗಾಚಾರಿ

ಅನುವಾದ: ಕೆ. ವಿ. ಸುಬ್ಬಣ್ಣ

ಚಿತ್ರಗಳು: ಪಿ. ಖೇಮರಾಜ್






ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ



ISBN 81-237-0795-9

ಮೊದಲ ಮುದ್ರಣ : 1972 (*ಶಕ 1894*)
ಐದನೆಯ ಮರು ಮುದ್ರಣ : 2002 (*ಶಕ 1923*)

Tales for All Times *(Kannada)*
**ರೂ. 10.00**
ನಿರ್ದೇಶಕರು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ
ಎ-5, ಗ್ರೀನ್ ಪಾರ್ಕ್, ಹೊಸ ದೆಹಲಿ 110 016
ಇವರಿಂದ ಪ್ರಕಟಿತ.



## ಸಾವಿನ ಜತೆಗೆ ಸಂಭಾಷಣೆ

ರಾಜಕನ್ಯೆ ಸಾವಿತ್ರಿ ತಂದೆಯ ಎದುರು ನಿಂತಿದ್ದಳು. ಕೋಮಲವಾಗಿ ಸುಂದರವಾಗಿ ಕಾಣು-ತ್ತಿದ್ದಳು. ಆದರೆ ದೃಢವಾಗಿದ್ದಳು. ಆಕೆಯ ಮುಖದ ಮೇಲೆ ದೃಢನಿಶ್ಚಯ ಎದ್ದು ಕಾಣುತ್ತಿತ್ತು. ಅದನ್ನು ಅವನು ಯಾವಾಗಲೂ ಕಂಡದ್ದೇ. ಆದರೆ ಅದಕ್ಕೆ ಆತ ಏನೂ ಮಾಡುವ ಹಾಗಿರಲಿಲ್ಲ.

"ನನ್ನ ಪತಿಯನ್ನು ನಾನೇ ಆರಿಸಿಕೊಳ್ಳಬಹುದೆಂದು ನೀನು ಹೇಳಿದ್ದೆ", ಆಕೆ ನೆನಪು ಮಾಡಿ ಕೊಟ್ಟಳು. "ನೀನೇ ಹಾಗೆ ಹೇಳಿದ್ದೆ, ನೆನಪಿಲ್ಲವೆ ಅಪ್ಪ? ಈಗ ಮಾತ್ರ ನೀನು ಮಾತು ಬದಲಿಸುವ ಹಾಗೆ ಕಾಣುತ್ತದೆ".

ರಾಜ ಉತ್ತರ ಹೇಳುವ ಮೊದಲೇ, ನಾರದ ಮುನಿ ಮೆಲ್ಲಗೆ ಅಲ್ಲಿ ಪ್ರವೇಶ ಮಾಡಿದ, ತಂದೆ ಮಗಳ ವಾಗ್ವಾದವನ್ನು ತಡೆಯುವುದಕ್ಕೆ. ಆತ ಹೇಳಿದ, "ಮಗಳೇ, ನಿನ್ನ ತಂದೆ ಆಡಿದ ಮಾತಿಗೆ ತಪ್ಪುವುದಿಲ್ಲ. ನೀನು ಮದುವೆಯಾಗಲಿರುವ ಸತ್ಯವಾನನ ಬಗ್ಗೆ ಅವನು ನನ್ನನ್ನು ಕೇಳುತ್ತಿದ್ದ, ಅಷ್ಟೆ. ನಾನು ಸತ್ಯವಾನನ ಬಗ್ಗೆ ಹೇಳತೊಡಗಿದಾಗ, 'ಸಾವಿತ್ರಿಯನ್ನು ಕರೆಸುತ್ತೇನೆ, ನೀವು ಹೇಳುವುದನ್ನು ಆಕೆಯೂ ಕೇಳಲಿ' ಎಂದು."

"ನೀವು ಏನು ಹೇಳುತ್ತಿದ್ದಿರಿ?" ಸಾವಿತ್ರಿ ಪ್ರಶ್ನೆ ಮಾಡಿದಳು.

ನಾರದನ ಜತೆಯಲ್ಲಿ ತಾನು ತುಂಬ ತುಂಬ ಜಾಗರೂಕಳಾಗಿರಬೇಕೆಂದು ಸಾವಿತ್ರಿಗೆ ಗೊತ್ತಿತ್ತು. ತಾನು ಚತುರೆಯಾಗಿದ್ದರೂ ನಾರದ ತನಗಿಂತಲೂ ಚತುರನಾಗಿದ್ದ. ಆತ ದೇವತೆಗಳಿಗೆ ಮನುಷ್ಯರಿಗೆ ಇಬ್ಬರಿಗೂ ಮಿತ್ರನಾಗಿದ್ದ, ಸಲಹೆಗಾರನಾಗಿದ್ದ, ಇಬ್ಬರ ಮಧ್ಯೆ ರಾಯಭಾರಿಯಾಗಿದ್ದ; ಆತ ಏನು ಮಾಡಿದರೂ ಅದು ಕೊನೆಯಲ್ಲಿ ಪ್ರತಿಯೊಬ್ಬರಿಗೂ ಒಳ್ಳೆಯದಾಗಬೇಕು ಎಂದೇ ಮಾಡುತ್ತಿದ್ದ. ಆದರೆ ಎಷ್ಟೋ ಸಲ ಆತ ಮಾಡಿದ್ದು ಕೊನೆಯಲ್ಲಿ ಏನಾದರೂ, ಆ ಕೂಡಲೇ ಮಾತ್ರ ಸರಿಯಲ್ಲ ಎಂದೇ ಕಾಣುತ್ತಿತ್ತು. ಏಕೆಂದರೆ ನಾರದ ನರಿಯ ಹಾಗೆ ತಂತ್ರಿ; ಎಂತಹ ಚತುರ ಮನುಷ್ಯನನ್ನೂ ಸಿಕ್ಕಿಸಬಲ್ಲವ. ಸಾವಿತ್ರಿ ಅವನ ಬಗ್ಗೆ ಸೂಕ್ತ ಗೌರವವನ್ನಿಟ್ಟು ಕೊಳ್ಳಲು ಕಲಿತುಕೊಂಡಿದ್ದಳು.

ನಾರದ ಶುರು ಮಾಡಿದ: "ನೀನು ಪ್ರೀತಿಸುವ ಸತ್ಯವಾನ ಸತ್ಕುಲದಲ್ಲಿ ಹುಟ್ಟಿದ ಯೋಗ್ಯ ತರುಣ, ಸತ್ಯವಾನ್ ಎಂದರೆ ಸತ್ಯವನ್ನೇ ಹೇಳುವವನು ಎಂದು ಅರ್ಥ. ಆ ಹೆಸರು ಅವನಿಗೆ ಸಾರ್ಥಕವಾಗಿದೆ. ಆತ ಬುದ್ಧಿವಂತನೂ ಧೈರ್ಯಶಾಲಿಯೂ ಆಗಿದ್ದಾನೆ; ದುಷ್ಟ ಬಂಧುವಿನ ದೆಸೆಯಿಂದ ಸಿಂಹಾಸನ ಕಳೆದುಕೊಂಡ ವೃದ್ಧನೂ ಕುರುಡನೂ ಆದ ತನ್ನ ತಂದೆಯನ್ನು ವಿಧೇಯನಾಗಿ ಸೇವಿಸುತ್ತಿದ್ದಾನೆ. ಆದರೆ ಸಿಂಹಾಸನವನ್ನೇರಬೇಕಾಗಿದ್ದ ಆತ ಕಾಡಿನಲ್ಲಿ ಮರ ಕಡಿಯುವ ಕೆಲಸ ಮಾಡುತ್ತ ಜೀವಿಸುತ್ತಿದ್ದಾನೆ".

"ಇದೆಲ್ಲ ನನಗೆ ಗೊತ್ತಿದೆ" ಎಂದಳು ಸಾವಿತ್ರಿ.

"ಬಹುಶಃ ಇನ್ನೂ ಎಷ್ಟೋ ನಿನಗೆ ಗೊತ್ತಿರಬಹುದು," ಎಂದು ಕೆಣಕಿದ ನಾರದ.

"ನಿಮಗೆ ಏನೇನು ಗೊತ್ತು ಎಂಬುದನ್ನು ಅದು ಅವಲಂಬಿಸಿದೆ" ಎಂದು ಮರು ನುಡಿದಳು ಸಾವಿತ್ರಿ.

ನಾರದ ಮುಗುಳ್ನಕ್ಕ. "ಈ ಪುಟ್ಟ ಪೋರಿ ನನ್ನನ್ನು ಸೋಲಿಸಬಲ್ಲೆ ಎಂದುಕೊಂಡಿದ್ದಾಳೆ" ಎಂದು ಯೋಚಿಸಿದ.

"ನಿನಗೆ ಗೊತ್ತಿಲ್ಲದ ಇನ್ನೊಂದು ವಿಷಯ ನನಗೆ ಗೊತ್ತಿದೆ. ಈಗ ನಿನ್ನ ತಂದೆಗೆ ಅದನ್ನೇ ಹೇಳುತ್ತಿದ್ದೆ", ಎಂದ ಮುನಿ.

"ಸತ್ಯವಾನ ಶಾಪಗ್ರಸ್ತ ಎನ್ನುವ ಸಂಗತಿಯೆ?" ಸಾವಿತ್ರಿ ಶಾಂತಳಾಗಿ ಪ್ರಶ್ನಿಸಿದಳು. "ಇವತ್ತಿನಿಂದ ಒಂದು ವರ್ಷ ಅವಧಿಗೆ ಸರಿಯಾಗಿ ಅವನು ಸಾಯುತ್ತಾನೆ ಎನ್ನುವುದೇ?"

ಈ ಮಾತುಗಳನ್ನಾಡುವಾಗ ಅವಳ ಧೈರ್ಯ ಕಂಡು, ಕೇಳುತ್ತಿದ್ದ ಇಬ್ಬರೂ ನಡುಗಿ ಹೋದರು.

"ಹಾಗಿದ್ದೂ ಅವನನ್ನೇ ಮದುವೆಯಾಗಬೇಕೆನ್ನುತ್ತೀಯಾ?" ತಂದೆ ಆಶ್ಚರ್ಯದಿಂದ ಕೇಳಿದ. ಅವನ ದನಿ ಕಂಪಿಸುತ್ತಿತ್ತು.

"ಇದು ನಿನಗೆ ಹೇಗೆ ತಿಳಿಯಿತು?" ಅವಳನ್ನೇ ಯೋಚನಾಮಗ್ನನಾಗಿ ನೋಡುತ್ತ ಕೇಳಿದ ನಾರದ. "ಅವನ ತಂದೆ ತಾಯಿಗಳನ್ನು ಕಂಡಿದ್ದೆಯಾ?"

"ಹೌದು" ಎಂದಳು ಸಾವಿತ್ರಿ. "ಮಹಾ ಧರ್ಮಿಷ್ಠೆಯಾದ ಅವನ ತಾಯಿ ನನಗೆ ಹೇಳಿದಳು. ಸತ್ಯವಾನ ಹುಟ್ಟಿದಾಗ ಅವನ ಜಾತಕವನ್ನು ರಚಿಸಿದ ಬ್ರಾಹ್ಮಣರು ಆಕೆಗೆ ಇದನ್ನು ಎಚ್ಚರಿಸಿ ಹೇಳಿದ್ದರು. ಆದರೆ ಸತ್ಯವಾನನಿಗೆ ಇದು ತಿಳಿಯದು, ತಂದೆ ತಾಯಿಗಳಿಗಷ್ಟೆ ಗೊತ್ತು. ಇಷ್ಟು ದಿನವೂ ಅವರು ಇದನ್ನು ಗುಟ್ಟಾಗಿಯೇ ಇಟ್ಟಿದರಿಂದ ತುಂಬ ವೇದನೆಗೆ ಒಳಗಾಗಿದ್ದಾರೆ."

"ಹೇಳು ಸಾವಿತ್ರಿ", ಎಂದ ನಾರದ. ಅವನ ಮಾತಿನಲ್ಲಿ ಗೌರವದ ದನಿ ಮೂಡುತ್ತಿತ್ತು. "ನೀನು ಸತ್ಯವಾನನನ್ನೇ ಮದುವೆಯಾದರೆ ಮುಂದೇನಾಗುತ್ತದೆ ಎನ್ನುವುದನ್ನು ಅರಿತುಕೊಂಡಿದ್ದೀಯಾ?"

"ಗೊತ್ತಿದೆ" ಎಂದಳು ಸಾವಿತ್ರಿ, ಅಳುಕೇ ಇಲ್ಲದೆ.

"ನಿನಗೆ ಭಯವಾಗುವುದಿಲ್ಲವೆ?"

"ದುಃಖವಾಗುತ್ತದೆ, ಹೌದು," ಸಾವಿತ್ರಿ ಗಂಭೀರವಾಗಿ ಉತ್ತರಿಸಿದಳು. "ಆದರೆ, ಭಯ ಇಲ್ಲ. ನೋಡಿ. ಆದೇ ವೃತ್ತಿಯಲ್ಲಿರುವ ಬ್ರಾಹ್ಮಣರು ಲೆಕ್ಕ ಹಾಕುವ ಹಾಗೆ ಕೇವಲ ಗ್ರಹ ನಕ್ಷತ್ರಗಳ ಸ್ಥಾನಬಲವೇ ಜೀವ ಮರಣಗಳನ್ನು ನಿರ್ಧರಿಸಲಾರದು ಎಂದು ನನ್ನ ನಂಬಿಕೆ. ಮನುಷ್ಯರು ಕೂಡ ಒಬ್ಬರು ಇನ್ನೊಬ್ಬರ ಬದುಕಿನ ಮೇಲೆ ಪ್ರಭಾವ ಮಾಡಬಲ್ಲರು. ನಾನು ಸತ್ಯವಾನನನ್ನು ಮದುವೆಯಾದರೆ ನನ್ನ ಅದೃಷ್ಟ ಅವನ ಅದೃಷ್ಟದ ಮೇಲೆ ಪ್ರಭಾವ ಬೀರ ಬಲ್ಲದು. ಮುಂದೆ ಏನಾಗುತ್ತದೆ ಎಂಬುದನ್ನಾಗಲೀ ಯಾವುದನ್ನು ತಡೆಯಬಹುದು ಎಂಬುದನ್ನಾಗಲೀ ಯಾರು ಬಲ್ಲರು?"

ನಾರದ ಎದ್ದು ಹೇಳಿದ, "ಅಶ್ವಪತಿ, ಇನ್ನು ಈ ವಿವಾಹಕ್ಕೆ ಯಾವುದೇ ಆತಂಕವೂ ಬೇಡ.

"ಅವಳು ನಿನ್ನ ಜತೆ ಬರಲಿ ಮಗು" ಎಂದಳು ತಾಯಿ, ತತ್‌ಕ್ಷಣವೇ.

"ಬೆಳಗಿನ ಮಟ್ಟಿಗಾದರೂ ಸೊಸೆಯ ತಂಟೆ ತಪ್ಪಲಿ ಎಂಬ ಆಶೆಯೆ ಅಮ್ಮ?" ಎಂದ ಸತ್ಯವಾನ್, ಕಣ್ಣು ಹೊಳೆಸುತ್ತ.

"ನನ್ನ ಮಗನಿಗೆ ಎಳೆಯ ಹೆಂಡತಿಯನ್ನು ಮುದ್ದುಮಾಡಲು ಕಲಿಸಬೇಕೆಂದೇ ನನ್ನ ಆಸೆ." ಎಂದು ತಾಯಿ ತಿರುಗಿಸಿದಳು. "ಪಾಪ ಆ ಹುಡುಗಿಗೆ ಇಲ್ಲಿ ಹೊತ್ತು ಕಳೆಯಲಿಕ್ಕಾದರೂ ಏನಿದೆ?"

"ಅವಳನ್ನು ಮುದ್ದುಮಾಡಿ ಒಲಿಸುವುದೆ?" ಸತ್ಯವಾನ್ ತಮಾಷೆ ಮಾಡಿದ. "ವಜ್ರ ಮಾಣಿಕ್ಯಗಳ ಹಾರವನ್ನು ಕೊಟ್ಟು ಅವಳನ್ನು ಒಲಿಸಬೇಕೆಂದು ನನ್ನ ಆಸೆ. ಅದಕ್ಕೆ ಬದಲು ಕಾಡಿಗೆ ಕೊಂಡೊಯ್ದರೆ ಏನು ಪ್ರಯೋಜನ?"

"ವಜ್ರ ಮಾಣಿಕ್ಯಗಳ ಹಾರವೆ?" ಮೇಲುನಗೆ ಹೊಳೆಸುತ್ತ ಕೇಳಿದಳು ಸಾವಿತ್ರಿ. ಒಳಗೆ ಅವಳ ಹೃದಯ ಬಿಚ್ಚಿದ್ರಗೊಳ್ಳುತ್ತಿತ್ತು. "ಇವತ್ತು ಕಾಡಿಗೆ ಹೋಗಲು ಒಪ್ಪುತ್ತೇನೆ. ಆದರೆ, ವಜ್ರ ಮಾಣಿಕ್ಯಗಳ ಹಾರ ಮಾತು ಕೊಟ್ಟಿದ್ದು ನೆನಪಿರಲಿ. ಒಂದು ದಿನ ನಾನು ಅದನ್ನು ಕೇಳಿ ಪಡೆಯುತ್ತೇನೆ."

ಹೊಣೆಯರಿಯದ ಮಕ್ಕಳ ಹಾಗೆ ಸಾವಿತ್ರಿ ಸತ್ಯವಾನರು ನಗುತ್ತ, ಒಬ್ಬರಿಗೊಬ್ಬರು ಏನೇನೋ ಅಮೂಲ್ಯ ಕಾಣಿಕೆಗಳನ್ನು ಕೊಡುವುದಾಗಿ ಮಾತು ಕೊಟ್ಟುಕೊಳ್ಳುತ್ತ, ಕಾಡಿಗೆ ಹೊರಟರು. ಸತ್ಯವಾನ್ ತಾಯಿ ತಂದೆಯರನ್ನು ಬೀಳ್ಕೊಟ್ಟಾಗ ಅವರು ಎಂದಿಗಿಂತ ಹೆಚ್ಚು ಹೊತ್ತು ಅವನ ಮೇಲೆ ಕೈಯಾಡಿಸಿದರು, ಕಣ್ಣಾಡಿಸಿದರು. ಸಾವಿತ್ರಿ ಅದನ್ನು ನೋಡದ ಹಾಗೆ ನಟಿಸಿದಳು, ಇಲ್ಲದಿದ್ದರೆ ಕಣ್ಣಂಚಿಗೆ ಬಂದಿದ್ದ ನೀರು ತುಳುಕಿ ಅವನ ಗಮನ ಸೆಳೆದು ಬಿಡಬಹುದಿತ್ತು. ಆಕೆ ತನಗೇ ನೆನಪು ಮಾಡಿಕೊಳ್ಳುತ್ತಿದ್ದಳು, "ಇವತ್ತು ನನಗೆ ನನ್ನ ಸಮಸ್ತ ಧೈರ್ಯವೂ ಬೇಕು, ಸಂಯಮವೂ ಬೇಕು. ಬಂಧು ಬಾಂಧವರು ನಾರದ ಮುನಿ ಎಲ್ಲರ ಹಾರೈಕೆ ಬೇಕು, ಆಶೀರ್ವಾದಬೇಕು. ಎಲ್ಲಕ್ಕಿಂತ ನಾನು ಸಿದ್ಧಳಾಗಬೇಕು."

ಕಾಡಿನ ಮಧ್ಯೆ ಬಂದ ಮೇಲೆ ಸತ್ಯವಾನ್ ತಾನು ಕತ್ತರಿಸಬೇಕಾದ ಮರ ಯಾವುದೆಂದು ನೋಡಿದ. ಬಲವಾಗಿದ್ದ ಅದರ ಬುಡವನ್ನು ಕತ್ತರಿಸತೊಡಗಿದ್ದ ಸಾವಿತ್ರಿ ಹತ್ತಿರದಲ್ಲೇ ಕೂತು, 'ತನ್ನ ಪ್ರಿಯನಾದ ಪತಿಯನ್ನು ಸೆಳೆದೊಯ್ಯಲು ಮೃತ್ಯು ಯಾವ ರೂಪದಲ್ಲಿ ಬಂದೀತೋ ಎಂದು. ಹಾವು ಬಂದೀತೋ ಕಾಡು ಮೃಗ ಬಂದೀತೋ ಎಂದು ಕಾಯುತ್ತಿದ್ದಳು. ಆದರೆ ಅಂಥಾದ್ದೇನೂ ನಾಟಕೀಯವಾದದ್ದೂ ನಡೆಯಲಿಲ್ಲ.



ಎತ್ತರ ಬೆಳೆದಿದ್ದ ಹುಲ್ಲುಗಳಿಂದ ಹುಲಿ ಹೊಂಚಲಿಲ್ಲ, ಪೊದೆಯಿಂದ ಹಾವು ತಲೆಯೆತ್ತಿ ಕುಟುಕಲಿಲ್ಲ ! ಒಂದು ಕ್ಷಣ ಸತ್ಯವಾನ್ ಕೊಡಲಿಯೆತ್ತಿ ಬೀಸಿದ, ಮರುಕ್ಷಣ ಆತ ತಲೆಹಿಡಿದುಕೊಂಡು ತನ್ನ ಪತ್ನಿಯ ಕಡೆಗೆ ತೂಗಿ ನೆಲಕ್ಕೆ ಬಿದ್ದುಬಿಟ್ಟ ಎಚ್ಚರತಪ್ಪಿತು.

ಸಾವಿತ್ರಿ ಆತನ ತಲೆಯನ್ನೆತ್ತಿ ತೊಡೆಯ ಮೇಲಿಟ್ಟುಕೊಂಡು ಸಹಾಯಕ್ಕಾಗಿ ಸುತ್ತ ನೋಡಿದಳು. ಒಂದು ಪ್ರಾಣಿ ಕೂಡ ಕಣ್ಣಿಗೆ ಬೀಳಲಿಲ್ಲ. ಹೀಗಾಗಿದ್ದು ಕಂಡು ಸಾವಿತ್ರಿ ಕಲ್ಲಾಗಿ ಕೂತುಬಿಟ್ಟಳು.

ಆಗ ಇದ್ದಕ್ಕಿದ್ದ ಹಾಗೆ, ಒಂದು ನೆರಳು ಸೂರ್ಯನಿಗೆ ಮರೆಯಾಗಿ ಈಕೆಯ ಮುಖಕ್ಕೆ ಬಿದ್ದಿತು. ಇಡೀ ಕಪ್ಪಾದ ಒಂದು ಆಕೃತಿ, ಆಕೆಯ ಎದುರು ನಿಂತಿತ್ತು, ಬರೀ ನೆರಳಿನ ಹಾಗೆ ಕಾಣುತ್ತ. ಅದು ಬಾಗಿತು. ಅದರ ಭಾರೀ ದೊಡ್ಡ ಹಸ್ತ ಒಂದು ಕ್ಷಣ ಸತ್ಯವಾನನ ಕೊರಳನ್ನು ಹಿಡಿಯಿತು. ಸಾವಿತ್ರಿ ತಲೆಯೆತ್ತಿ ನೋಡಿದಳು. ಆದರೆ ಅಷ್ಟರಲ್ಲಿ ಆ ಆಕೃತಿ ತಿರುಗಿ ಹೊರಟುಬಿಟ್ಟಿತ್ತು.



"ನಿಲ್ಲು" ಎಂದು ಕೂಗಿದಳು ಸಾವಿತ್ರಿ, ಅದರ ಹಿಂದೇ ಓಡುತ್ತ. "ದಯಮಾಡಿ ನಿಲ್ಲು. ನಿನ್ನ ಜತೆ ಮಾತನಾಡಬೇಕಾಗಿದೆ".

ಆ ನೆರಳು ನಿಂತಿತು. ಸಾವಿತ್ರಿ ಹತ್ತಿರ ಹೋದಳು. ಅದರ ಮುಖವನ್ನೇ ಕಣ್ಣಿಟ್ಟು ನೋಡಿದಳು. ಮುಖ ಶಾಂತವಾಗಿತ್ತು, ಬಹು ಗಂಭೀರವಾಗಿತ್ತು. ಅದನ್ನು ಕಂಡ ಕ್ಷಣವೇ ಅವಳ ಭೀತಿ ಹಾರಿಹೋಯಿತು, ಮನಸ್ಸು ಶಾಂತ ಗೊಂಡಿತು, ಅಭಯ ಸಿಕ್ಕಂತೆ ಅನ್ನಿಸಿತು.

"ಹೀಗೆ ಕೇಳಿದ್ದಕ್ಕೆ ಕ್ಷಮಿಸು" ಎಂದಳು ಆಕೆ ವಿನೀತಳಾಗಿ. "ನೀನು ಮೃತ್ಯುದೇವತೆಯೆ ? ಯಮನೆ?"

"ಹೌದು".

"ನಾನು ನಿನ್ನ ಬಗ್ಗೆ ತುಂಬ ಕೇಳಿದ್ದೇನೆ" ಸಾವಿತ್ರಿ

ಮುಂದುವರಿಸಿದಳು. "ಆದರೆ ಇನ್ನೂ ಕೇಳಿಕೊಳ್ಳಬೇಕಾದ್ದು ಬಹಳವಿದೆ. ಪ್ರತಿಯೊಂದು ಜೀವವನ್ನೂ ನೀನೇ ಸ್ವತಃ ಬಂದು ಸೆಳೆದುಕೊಂಡು ಹೋಗುತ್ತೀಯಾ?"

"ಇಲ್ಲ ವಿಶಿಷ್ಟವಾದ ಜೀವಗಳಿದ್ದಲ್ಲಿ ಮಾತ್ರ ನಾನೇ ಬರುತ್ತೇನೆ" ಎನ್ನುತ್ತ ಮೃತ್ಯು ಮುಂದೆ ನಡೆಯತೊಡಗಿತು.

ಸಾವಿತ್ರಿ ಸ್ಥಿರಳಾಗಿ ಕೇಳಿದಳು, "ಸತ್ಯವಾನ್ ಹಾಗೆ ವಿಶಿಷ್ಟನೇ ಆಗಿದ್ದರೆ, ಅವನಿನ್ನೂ ಇಷ್ಟು ಚಿಕ್ಕವನಿರುವಾಗ ಯಾವ ತಪ್ಪನ್ನೂ ಮಾಡದ ನಿರ್ದೋಷಿಯಾಗಿರುವಾಗ, ಏಕೆ ಆತನ ಜೀವವನ್ನು ಸೆಳೆದೊಯ್ಯುತ್ತೀಯೆ?"

"ಸಾವು ಎಂದರೆ ಶಿಕ್ಷೆಯಲ್ಲ".

ಆ ವಿಚಿತ್ರ ವ್ಯಕ್ತಿಯ ಜತೆಯಲ್ಲೇ ಸಾವಿತ್ರಿ ಬೇಗ ಬೇಗ ಕಾಲು ಹಾಕಿದಳು. ಆಕೆ ಮತ್ತೆ ಹೇಳಿದಳು: "ಸಾವು ಶಿಕ್ಷೆಯಲ್ಲವೆಂದಾದರೆ, ಒಂದು ಬದುಕು ಯಾವಾಗ ಕೊನೆಗೊಳ್ಳಬೇಕೆಂದು ಯಾರು ನಿರ್ಧರಿಸುತ್ತಾರೆ? ಹುಟ್ಟುವಾಗಲೇ ಅದನ್ನು ನಿರ್ಧರಿಸುವುದು ಅನ್ಯಾಯ, ಅಸಮಂಜಸ ಕೂಡ."

"ಅದನ್ನು ತಿಳಿಯುವುದು ಸುಲಭವಲ್ಲ". ಆ ನೆರಳು ನಿಂತಿತು. "ಸಾವಿತ್ರಿ, ಏಕೆ ಹಿಂತಿರುಗುವುದಿಲ್ಲ? ನನ್ನನ್ನೇಕೆ ಹಿಂಬಾಲಿಸುತ್ತೀಯೆ?"



"ನಾನು ನಿನ್ನನ್ನು ಹಿಂಬಾಲಿಸುತ್ತಿಲ್ಲ", ಎಂದಳು ಸಾವಿತ್ರಿ "ನಾನು ನನ್ನ ಪತಿಯನ್ನು ಹಿಂಬಾಲಿಸುತ್ತಿದ್ದೇನೆ".

"ಮುಗಿಯಿತು. ಈಗ ಅವನು ನಿನ್ನ ಪತಿಯಲ್ಲ."

"ಪ್ರೇಮ ಬದುಕಿನ ಆಚೆಗೂ ಹೋಗುತ್ತದೆ ಎಂದು ನನ್ನ ನಂಬಿಕೆ" ಎಂದಳು ಸಾವಿತ್ರಿ, ಮೃದುವಾಗಿ. "ಒಂದು ಗಂಡು ಒಂದು ಹೆಣ್ಣು ಪ್ರೇಮಿಸಿದರೆ ಅವರು ಒಬ್ಬರನ್ನೊಬ್ಬರು ಗುರುತಿಸಿಕೊಂಡರು ಎನ್ನುತ್ತೇವೆ. ಮೊದಲೇ ಗೊತ್ತಿದ್ದ ಒಂದು ವ್ಯಕ್ತಿಯನ್ನು ಗುರುತಿಸಿ ಕೊಳ್ಳುವುದು ಅದು ಅಷ್ಟೇ. ನಾನು ಮೊದಲ ಸಲ ಕಂಡಾಗಲೇ ಸತ್ಯವಾನನನ್ನು ಗುರುತಿಸಿದೆ. ಆದ್ದರಿಂದ ಅದಕ್ಕೆ ಹಿಂದೆ ನಮಗೆ ಪರಿಚಯವಿರಬೇಕು. ನನ್ನ ಅಥವಾ ಅವನ ಹುಟ್ಟಿಗೆ ಮೊದಲು, ಯಾವುದೋ ಗೊತ್ತಿಲ್ಲದ ಕಾಲದಲ್ಲಿಲ್ಲದೆ ಮತ್ತೆ ಯಾವಾಗ ನಮ್ಮ ಪೂರ್ವ ಪರಿಚಯ ಇರಲು ಸಾಧ್ಯ? ಅದಕ್ಕೇ ನಾನು ಅವನನ್ನು ಈಗ ಬಿಡಲಾರೆ. ನಾವಿಬ್ಬರೂ ದೀರ್ಘಕಾಲದಿಂದ ಒಟ್ಟಿಗಿದ್ದೇವೆ. ನೀನು ಅವನನ್ನು ಒಯ್ಯುವುದಾದರೆ ನನ್ನನ್ನೂ ಒಯ್ಯಬೇಕು".

ಮೃತ್ಯು ದೇವತೆಯಾದ ಯಮ ಮೇಲುನಕ್ಕ. "ನೀನು ಅತ್ಯಂತ ಸ್ಥಿರಳಾಗಿದ್ದೀಯೆ. ನಿನ್ನ ತರ್ಕ ನನ್ನನ್ನು ಆಕರ್ಷಿಸಿದೆ. ನಿನಗೆ ಏನು ಬೇಕು ಹೇಳು—ಸತ್ಯವಾನನ ಜೀವವೊಂದನ್ನು ಬಿಟ್ಟು ಏನಾದರೂ ಕೇಳು, ನನಗೆ ಕೊಡುವ ಇಚ್ಛೆಯಾಗಿದೆ".

ಆತನ ಸೂಚನೆಯ ಬಗ್ಗೆ ಸಾವಿತ್ರಿ ಯೋಚಿಸಿದಳು.

ಕೊನೆಯಲ್ಲಿ ಆಕೆ ಹೇಳಿದಳು: "ಒಳ್ಳೆಯದು. ಸತ್ಯವಾನನ ತಂದೆಯನ್ನು ಕ್ರೌರ್ಯದಿಂದ ಸಿಂಹಾಸನಚ್ಯುತಗೊಳಿಸಿದ್ದು ನಿನಗೆ ಗೊತ್ತು. ಆ ತಪ್ಪನ್ನು ಸರಿಪಡಿಸಬೇಕೆಂದು ನನಗೆ ಅನ್ನಿಸುತ್ತದೆ. ನೀನೂ ಒಪ್ಪುತ್ತೀಯಲ್ಲವೆ?"

"ಒಪ್ಪಿದೆ" ಎಂದ ಯಮ. ಕೂಡಲೇ ವೇಗದಿಂದ ಹೊರಟು ಬಿಟ್ಟ. ಆದರೆ ಸ್ವಲ್ಪ ಹೊತ್ತಿನ ಅನಂತರ ಆತ ಹಿಂತಿರುಗಿ ನೋಡಿದಾಗ, ಅವನ ಹಿಂದೇ ಇದ್ದಳು ಸಾವಿತ್ರಿ. ದಾರಿಯಲ್ಲಿದ್ದ ಕಲ್ಲು ಮುಳ್ಳುಗಳಿಂದ ಅವಳ ಕಾಲು ಗಾಯವಾಗಿ ರಕ್ತ ಸುರಿಯುತ್ತಿತ್ತು.

"ನಿನ್ನ ನಡಗೆ ನನಗಿಂತ ಬಹಳ ವೇಗ" ಎಂದಳು ಸಾವಿತ್ರಿ, ನಗು ತುಳುಕಿಸುತ್ತ.

"ಸಾವಿತ್ರಿ, ನಿನಗೆ ಬೇಕಾದ್ದಾದರೂ ಏನು?" ಯಮ ಆಕೆಯನ್ನೇ ಕಣ್ಣಿಟ್ಟು ನೋಡುತ್ತ ಪ್ರಶ್ನಿಸಿದ. "ಸತ್ಯವಾನನ ಜೀವಬೇಕು ಎನ್ನುವುದಾದರೆ, ಈ ಕ್ಷಣವೇ ಅದರ ಆಸೆ ಬಿಟ್ಟುಬಿಡು. ಆ ಪ್ರಶ್ನೆಯೇ ಇಲ್ಲ. ಯಮ ತನ್ನ ಮಾತಿಗೆ ತಪ್ಪಿದ್ದೂ ಇಲ್ಲ, ಕೊಂಡ ಜೀವವನ್ನು ಮರಳಿ ಬಿಟ್ಟಿದ್ದೂ ಇಲ್ಲ."

"ಓ, ಹೌದೇ?" ಎಂದಳು ಸಾವಿತ್ರಿ, ಯೋಚನೆಯಲ್ಲಿ ತಲೆತೂಗುತ್ತ. "ನಿನ್ನ ಮಾತಿನಲ್ಲಿ

ಆಸಕ್ತಿ ಹುಟ್ಟುತ್ತಿದೆ. ಆದರೆ, ಸರ್ವಥಾ ನ್ಯಾಯವಾದ್ದನ್ನೇ ಮಾಡುತ್ತಿದ್ದೇನೆ ಎನ್ನುವ ದೃಢ ನಿಶ್ಚಯ ನಿನಗಿರಬೇಕು, ಅಲ್ಲವೆ?"

"ನ್ಯಾಯಾನ್ಯಾಯಗಳ ಪ್ರಶ್ನೆಗೆ ಇಲ್ಲಿ ಅವಕಾಶವೇ ಇಲ್ಲ".

"ನಿಜವೆ?" ಆಶ್ಚರ್ಯದಿಂದ ಕೇಳಿದಳು ಸಾವಿತ್ರಿ. "ಇದು ವಿಶೇಷವಾದ ಮಾತು ! ನನಗೆ ನನ್ನ ಬಾಲ್ಯದಿಂದಲೂ ಯಾವತ್ತೂ ಎಚ್ಚರದಿಂದ ನ್ಯಾಯವನ್ನೇ ಆಚರಿಸಬೇಕು, ಅನ್ಯಾಯ ವಾದ್ದನ್ನು ಮಾಡಬಾರದು ಎಂಬುದು ತಲೆಯಲ್ಲಿ ಬೇರೂರಿ ಹೋಗಿದೆ. ಬಹುಶಃ ಅದು ಮರ್ತ್ಯರಿಗೆ ಮಾತ್ರ ಅನ್ವಯಿಸುತ್ತದೆ, ದೇವತೆಗಳಿಗಲ್ಲ".

"ಆದರೆ ಮೃತ್ಯುವಿನ ಮಾತು ಬೇರೆ".

"ಬೇರೆ ಹೇಗೆ? ಬದುಕಿನಲ್ಲಿ ಯಾವುದು ನ್ಯಾಯವನ್ನುತ್ತೇವೋ ಅದೇ ಸೂತ್ರ ಮೃತ್ಯು-ವಿಗೂ ಅನ್ವಯಿಸುತ್ತದೆ ಎಂದು ನನ್ನ ಭಾವನೆ".

"ನೀನು ಯಾವುದೇ ಮಾತನ್ನೂ ತಿರುಗಿಸಿ ಅದು ತರ್ಕಬದ್ಧವೆನ್ನುವ ಹಾಗೆ ಮಾಡಿ ಬಿಡುತ್ತೀಯೆ".

"ನನ್ನನ್ನು ಕ್ಷಮಿಸು" ಎಂದಳು ಸಾವಿತ್ರಿ, ವಿನೀತಳಾಗಿ. "ಬೇರೆ ರೀತಿಯಲ್ಲಿ ಹೇಳುತ್ತೇನೆ. ನಾವು ಬದುಕಿನಲ್ಲೆಲ್ಲ ಎಚ್ಚರದಿಂದ ನ್ಯಾಯವನ್ನೇ ಆಚರಿಸುತ್ತ ಬಂದಿದ್ದೇವಾದರೆ............"

"ನಿಲ್ಲು !" ಎಂದ ಯಮ. "ನಾನು ನಿನಗೆ ಇನ್ನೊಂದು ವರ ಕೊಟ್ಟರೆ ಹಿಂಬಾಲಿಸುವು-ದನ್ನು ಬಿಡುತ್ತೀಯಾ?"

"ಓ, ಇನ್ನೊಂದು ವರ ಕೊಡುತ್ತೀಯಾ?" ಸಾವಿತ್ರಿ ಆಶ್ಚರ್ಯದಿಂದ ಕೇಳಿದಳು. ಹರ್ಷಿತಳಾಗಿ ಕೈತಟ್ಟಿ ನಕ್ಕಳು. "ಎಂಥ ಕರುಣಾಳು ನೀನು, ಎಷ್ಟು ಉದಾರಿ !"

"ನೆನಪಿರಲಿ ಸತ್ಯವಾನನ ಜೀವವನ್ನು ಮಾತ್ರ ಕೇಳಬಾರದು."

"ಸರಿ" ಎಂದು ಒಪ್ಪಿದಳು ಸಾವಿತ್ರಿ. "ಈಗ ಹೇಳುತ್ತೇನೆ. ನಾನು ಮೊದಲು ಕೇಳಿದ್ದಕ್ಕೆ ಸಂಬಂಧಿಸಿ ಇನ್ನೊಂದು ಕೇಳಬೇಕಾಗಿತ್ತು." ಆಕೆ ಕೊಂಚ ತಡೆದಳು, ಮತ್ತೆ ಅವಳ ಹುಬ್ಬು ಸಡಲಿತು. "ಹೌದು. ನೀನು ಕರುಣೆಯಿಂದ ಸಿಂಹಾಸನ ಕೊಡಿಸಿದೆಯಲ್ಲ ಆ ನನ್ನ ಮಾವನ ಬಗ್ಗೆ. ಆತ ಕುರುಡ. ಕುರುಡನಿಗೆ ಸಾಮ್ರಾಜ್ಯದಿಂದ ಏನು ಪ್ರಯೋಜನ? ಮತ್ತು ಕುರುಡ ನಿಂದ ಸಾಮ್ರಾಜ್ಯಕ್ಕಾದರೂ ಏನು ಪ್ರಯೋಜನ?"

"ನಿನ್ನ ಮಾವನ ಕುರುಡು ಕಳೆದು ಕಣ್ಣುಗಳು ಸಂಪೂರ್ಣ ಸರಿಯಾಗುತ್ತದೆ" ಎಂದ ಯಮ, ನಗುತ್ತ.

ಮತ್ತೆ ಆತ ಹೊರಡುವುದರಲ್ಲಿದ್ದಾಗ, ದೃಢಮನಸ್ಸಿನ ಆ ಎಳೆಯ ಹೆಣ್ಣು ಕರುಣೆಗೆ ಕೃತಜ್ಞತೆಯಿಂದ ನಗುತ್ತ ಹೇಳಿದಳು: "ನನ್ನ ಮಾವನ ಕುರುಡು ನೆನಪಾದ್ದು ಒಳ್ಳೆಯದೇ ಆಯಿತು. ಇಲ್ಲದಿದ್ದರೆ ನಾನು ನಿನ್ನಲ್ಲಿ ಏನು ಬೇಡಿಕೊಳ್ಳುತ್ತಿದ್ದೆ ಗೊತ್ತೆ?"

"ಏನು ಬೇಡುತ್ತಿದ್ದೆ?"

ನನ್ನ ತಂದೆಯ ಮತ್ತು ಮಾವನ ರಾಜ್ಯಗಳೆರಡಕ್ಕೂ ಸುಖ ಸಮೃದ್ಧಿಗಳು ಸಿಕ್ಕಲಿ ಎನ್ನುತ್ತಿದ್ದೆ. ಈ ಎರಡೂ ರಾಜ್ಯಗಳಿಗೆ ಹಕ್ಕುದಾರಳಾಗಿ ಉಳಿದಿರುವುದು ನಾನೊಬ್ಬಳೇ. ಆದರೆ ಆ ಬೇಡಿಕೆಯನ್ನು ಈಡೇರಿಸು ಎಂದು ನಿನ್ನನ್ನು ಕೇಳದೇ ಇದ್ದದ್ದೇ ಒಳ್ಳೆಯದಾಯಿತು. ಮತ್ತೆ ಯೋಚಿಸಿದಾಗ ನನಗನ್ನಿಸುತ್ತದೆ, ಯಾಕೆ ನಾನು ಅದನ್ನು ಬೇಡಬೇಕು? ಈ ರಾಜ್ಯಗಳಿಗೆ ಸುಖಸಮೃದ್ಧಿಗಳು ಯಾಕಾದರೂ ಸಿಕ್ಕಬೇಕು? ತಮ್ಮ ರಾಜ್ಯದ ಪ್ರಜೆಗಳಿಗೆ ಸುಖ ಸಮೃದ್ಧಿಗಳು ಸಿಕ್ಕುವಂತೆ ಮಾಡಬೇಕಾದ್ದು ಅಲ್ಲಿನ ರಾಜರುಗಳ ಕರ್ತವ್ಯ. ಅಲ್ಲವೆ?"

"ಹೌದು".

"ರಾಜತ್ವ ಬಹಳ ದೊಡ್ಡ ಹೊಣೆ" ಸಾವಿತ್ರಿ ಗಂಭೀರವಾಗಿ ಹೇಳಿದಳು. "ಅರಮನೆಯಲ್ಲಿ ವಾಸಮಾಡುವುದು, ಓಲಗ ನಡೆಸುವುದು, ಕವಿಗಾಯಕರಿಗೆ ಆಶ್ರಯಕೊಡುವುದು. ತೆರಿಗೆ ಸಂಗ್ರಹಿಸುವುದು ಇವಿಷ್ಟೇ ರಾಜತ್ವವಲ್ಲ. ರಾಜನಾದವನು ನ್ಯಾಯವಿತರಣೆ ಸರಿಯಾಗಿ ನಡೆಯುತ್ತಿದೆ ಎಂಬುದನ್ನು ದೃಢಪಡಿಸಿಕೊಳ್ಳಬೇಕು. ಅಧಿಕಾರಿಗಳು ಜನರನ್ನು ಹಿಂಸಿಸದ ಹಾಗೆ ನೋಡಿಕೊಳ್ಳಬೇಕು. ಆತ ತನ್ನ ಅಕ್ಕಪಕ್ಕದವರ ಜತೆ ಶಾಂತಿಯನ್ನು ಕಾಪಾಡಿಕೊಳ್ಳಬೇಕು, ತನ್ನ ರಾಜ್ಯದೊಳಗೆ ಯಾರಿಗೂ ಅನ್ನ ವಸತಿ ವಸ್ತ್ರಗಳಿಗೆ ಕೊರತೆಯಾಗದಂತೆ ನೋಡಿಕೊಳ್ಳಬೇಕು. ಎಲ್ಲಕ್ಕಿಂತ ಹೆಚ್ಚಾಗಿ, ಜನರಿಗೆ ವಾಕ್ ಸ್ವಾತಂತ್ರ್ಯ ಟೀಕಿಸುವ ಸ್ವಾತಂತ್ರ್ಯ—ಪಕ್ಕಾಗಿ ದೊರಕಿದೆ ಎಂಬುದನ್ನು ಸಿದ್ಧಮಾಡಿಕೊಳ್ಳಬೇಕು. ಯಾಕೆ? ಇಲ್ಲದಿದ್ದರೆ ಆತ ದುಷ್ಟನಾಗಿಬಿಡಬಹುದು".

"ನಿಜ ನೀನು ಹೇಳುವುದು ಸಂಪೂರ್ಣ ಸತ್ಯ" ಎಂದ ಯಮ, ಆಕೆಯ ವಿಶಾಲದೃಷ್ಟಿಗಾಗಿ ಮೆಚ್ಚುಗೆ ಸೂಚಿಸುತ್ತ, "ಗ್ರಂಥಸ್ಥವಾದ ನ್ಯಾಯಸೂತ್ರಗಳಿಗಿಂತಲೂ ಸಂಪ್ರದಾಯವಾಗಿಯೇ ಬಂದ ನ್ಯಾಯ ಸ್ವಾತಂತ್ರ್ಯಗಳು ಹೆಚ್ಚು ಮಹತ್ವದವು".

"ಇದಕ್ಕೆ ಆಯಾ ರಾಜವಂಶಗಳು ಅಖಂಡವಾಗಿ ಮುಂದುವರಿಯುತ್ತ ಹೋಗಬೇಕಾದ್ದು ಅಗತ್ಯ. ಹೌದಲ್ಲವೆ?" ಸಾವಿತ್ರಿ ಪ್ರಶ್ನೆ ಮಾಡಿದಳು.

"ನಿಜ, ನಿಜ" ಎಂದ ಯಮ. "ಬರುವರಾಜ ಯಾರೆಂಬುದು ನಿಶ್ಚಯವಿಲ್ಲದಿದ್ದರೆ ರಾಜ ಪರಿವಾರದಲ್ಲಿ ಗೊಂದಲವುಂಟಾಗುತ್ತದೆ. ಯುದ್ಧ ಅನಾಯಕತ್ವಗಳುಂಟಾಗುತ್ತವೆ".

ಸಾವಿತ್ರಿ ಒಮ್ಮೆಲೆ ಮೌನತಾಳಿಬಿಟ್ಟಳು. ಅವಳ ಮುಖದ ಮೇಲೆ ಅತ್ಯಂತ ಹತಾಶೆಯ

ಭಾವ ಮೂಡಿತ್ತು, ಭುಜ ಕುಸಿದು ಹೋದವು. ಅವಳ ಚೆಲುವಾ ಕಣ್ಣುಗಳಿಂದ ಒಂದೊಂದೇ ಕಣ್ಣೀರ ಹನಿ ಉದುರಿತು.

''ಏನಾಯಿತು?'' ಎಂದು ಕೇಳಿದ ಯಮ, ಆಶ್ಚರ್ಯದಿಂದ.

''ಎಂಥ ವಿವೇಕ ಶಾಲಿ ನೀನು, ಎಲ್ಲವನ್ನೂ ಬಲ್ಲವ'' ಎಂದು ಸುಯ್ದಳು ಸಾವಿತ್ರಿ. "ನಾನು ಏನು ಚಿಂತಿಸುತ್ತಿದ್ದೇನೆಂದು ನಿಶ್ಚಯವಾಗಿಯೂ ನೀನು ಊಹಿಸಬಲ್ಲೆ".

ಯಮ ವಿಚಲಿತನಾದ. ಅವಳ ಚಿಂತೆಯ ಬಗ್ಗೆ ಊಹಿಸುವುದೆಂದರೆ, ಬಿರುಗಾಳಿಯಲ್ಲಿ ಗಾಳಿ ಯಾವ ಕಡೆ ಬೀಸುತ್ತದೆಂದು ಪಣಕಟ್ಟಿದಂತೆ. ಅಷ್ಟೇ ಕಷ್ಟ.

ಸಾವಿತ್ರಿ ಮೆಲುದನಿಯಲ್ಲಿ ಹೇಳಿದಳು: "ನನ್ನ ಚಿಂತೆ ಇದು—ನನ್ನ ಅನಂತರ ಆಳುವವರೇ ಇಲ್ಲದೆ ಎರಡು ರಾಜ್ಯಗಳು ಇಲ್ಲಿವೆ. ನನ್ನ ತಂದೆ ಮತ್ತು ಮಾವನ ವಂಶಗಳಿಗೆ ಏನು ದಿಕ್ಕು? ನನ್ನ ಮರಣಾನಂತರ ರಾಜ ಪರಿವಾರದಲ್ಲಿ ಎಂಥ ಗೊಂದಲ ವಿಪ್ಲವ ಯುದ್ಧ ನಡೆದು ಹೋದಾವು? ನೀನು ಕೂಡ ಅದೇ ಶಬ್ದಗಳನ್ನು ಹೇಳಿದೆ ಅಲ್ಲವೆ? ಮಾರ್ಗದಲ್ಲಿ ರಕ್ತ ಹರಿದೀತು, ನಗರಗಳು ನಿರ್ನಾಮವಾದಾವು, ಬೆಳೆಗಳು ಕೊಯ್ಯದೇ ನಾಶವಾದಾವು, ಮನೆ ಮನೆಯಲ್ಲೂ ಹೆಂಗಸರು ಮಕ್ಕಳು ಗೋಳಿಟ್ಟು ನರಳಿಯಾರು..............."

"ಸಾಕು" ಎಂದು ಕೂಗಿದ ಯಮ. "ಅಂಥದು ಆಗುವುದಕ್ಕೆ ನಾನು ಅವಕಾಶ ಕೊಡುವುದಿಲ್ಲ. ನಿನಗೆ ನೂರು ಮಕ್ಕಳನ್ನು ಹರಸುತ್ತೇನೆ. ನಿನ್ನ ರಾಜವಂಶ ಬೆಳೆಯಲಿ."

ಈ ಮಾತು ಹೇಳುತ್ತಿದ್ದಂತೇ ಸಾವಿತ್ರಿಯ ಮುಖ ಬದಲಾಗಿಬಿಟ್ಟಿತು. ಮುಖದಲ್ಲಿ ಹರ್ಷ ಸೂಸಿತು, ಭುಜಗಳು ನೇರಗೊಂಡವು, ಮಂತ್ರ ಹಾಕಿದ ಹಾಗೆ ನಿಟ್ಟುಸಿರು ಕಣ್ಣೀರುಗಳು ಮಾಯವಾದವು. ಆ ಬಾಲಕಿ ಸುಂದರಳಾಗಿ ರಾಜಕಳೆ ಸೂಸುತ್ತ ಯಮನೆದುರು ನಿಂತಿದ್ದಳು. ಅಂಗುಲ ಅಂಗುಲವೂ ಮಹಾರಾಣಿಯಾಗಿ.

ಆಕೆ ಸ್ವಾಭಾವಿಕವಾಗಿ ಹೇಳಿದಳು: "ಆದರೆ, ನಿನ್ನ ಸಂಪ್ರದಾಯವನ್ನೇ ಮುರಿದು ಹಾಕಿದ ಬಗ್ಗೆ ನನಗೆ ತುಂಬ ಕಳವಳವಾಗುತ್ತದೆ".

"ಯಾವ ಸಂಪ್ರದಾಯ" ಎಂದ ಮೃತ್ಯುದೇವತೆಯಾದ ಯಮ.

"ಯಮ ಒಮ್ಮೆ ಕೊಂಡ ಜೀವವನ್ನು ಮರಳಿಕೊಡುವುದಿಲ್ಲ ಎಂಬುದನ್ನು" ಎಂದಳು



ಸಾವಿತ್ರಿ. "ನೀನು ಈಗ ನನಗೆ ನೂರು ಮಕ್ಕಳನ್ನು ಹರಸಿದ್ದೀಯೆ. ನನ್ನ ಪತಿಯ ಜೀವವನ್ನು ನೀನು ಕೊಂಡೊಯ್ದರೆ ನಾನು ಮಕ್ಕಳನ್ನು ಪಡೆಯುವುದಾದರೂ ಹೇಗೆ?"

ಯಮ ಈ ಸೋಲಿನಿಂದ ಮನಸ್ಸು ಕೆಡಿಸಿಕೊಳ್ಳಲಿಲ್ಲ. ಇಬ್ಬರೂ ಪುನಃ ಕಾಡಿನ ಕಡೆ ತಿರುಗಿ ಹೊರಟಾಗ ಆತನೇ ಒಪ್ಪಿಕೊಂಡ: "ನಾರದ ನನ್ನಲ್ಲಿ ಬಂದು ಸತ್ಯವಾನನ ಜೀವವನ್ನು ನಾನೇ ಸೆಳೆದು ತರಬೇಕೆಂದು ಹೇಳಿದ. ಆಗಲೇ ಇದರ ಮರ್ಮವನ್ನು ನಾನು ತಿಳಿದುಕೊಳ್ಳಬೇಕಿತ್ತು".

ಮೃತ್ಯುದೇವತೆ ಸಾವಿತ್ರಿಗೆ ಕೊಟ್ಟ ವರಗಳೆಲ್ಲ ಫಲಿಸಿದವು. ಸತ್ಯವಾನ್ ನಿದ್ದೆಯಿಂದ ಎಚ್ಚರಗೊಂಡ ಹಾಗೆ ಲವಲವಿಕೆಯಿಂದ ಮೇಲಕ್ಕೆದ್ದ. ವಿಲಕ್ಷಣ ಕಾಳದೇಹಿಯ ಜತೆ ತಾನು ದೀರ್ಘ ಪ್ರಯಾಣ ಮಾಡಿ ಬಂದ ಹಾಗೆ ತನಗೆ ಸ್ವಪ್ನವಾದದ್ದನ್ನು ಸಾವಿತ್ರಿಗೆ ಹೇಳಬೇಕೆಂದು ಕಾತರ-





ನಾಗಿದ್ದ. ಸತ್ಯವಾನನ ತಂದೆ ತನ್ನ ಕಣ್ಣುಗಳನ್ನೂ ರಾಜ್ಯವನ್ನೂ ಮರಳಿ ಪಡೆದ. ಯಮ ಕಾಣಿಕೆಯಾಗಿ ಕೊಡಲಿಲ್ಲ ನಿಜ, ಆದರೂ ಸಾವಿತ್ರಿ ತನ್ನ ವಜ್ರ ಮಾಣಿಕ್ಯಗಳ ಹಾರವನ್ನು ಪಡೆದುಕೊಂಡಳು.

ಒಬ್ಬೊಬ್ಬರಿಗೂ ದೊರಕಿದ ಈ ಹೊಸ ವೈಭವದ ಬೆರಗು ಕ್ಷೀಣಿಸುತ್ತ ಬಂದ ಮೇಲೆ ಒಂದು ದಿನ ಸಾವಿತ್ರಿಯ ತಂದೆಯಾದ ಅಶ್ವಪತಿ ಆಕೆಯನ್ನು ಬೇರೆಯಾಗಿ ಕರೆದು ಕೇಳಿದ, "ಆ ಮೃತ್ಯುದೇವತೆಯ ಎದುರು ನಿಂತು ಸೆಣಸಲು ನಿನಗೆ ಧೈರ್ಯವಾದರೂ ಹೇಗೆ ಬಂತು?" ಎಂದು.

ಸಾವಿತ್ರಿ ಮೆಲುವಾಗಿ ನಕ್ಕಳು, ಹೇಳಿದಳು: "ನಾನು ಮೊದಲ ಸಲ ಸತ್ಯವಾನನ ತಾಯಿಯನ್ನು ಕಂಡಾಗಲೇ ಆಕೆ, ಸತ್ಯವಾನ್ ಹುಟ್ಟಿದಾಗ ಬ್ರಾಹ್ಮಣರು ಜಾತಕ ರಚಿಸಿದ್ದನ್ನು ಹೇಳಿದ್ದಳು. ಮತ್ತು ಆ ಬ್ರಾಹ್ಮಣರಲ್ಲಿ ಉಳಿದವರಿಗಿಂತ ಜ್ಞಾನಿಯೂ ದೂರದೃಷ್ಟಿಯುಳ್ಳವನೂ ಆದ ಒಬ್ಬ ಬ್ರಾಹ್ಮಣ ಮಾತ್ರ, ಉಳಿದವರು ಹೇಳಿದ ಭವಿಷ್ಯದ ತುದಿಯಲ್ಲಿ ತನ್ನದೊಂದು ಸೂಚನೆಯನ್ನು ಕೂಡಿಸಿದ್ದನಂತೆ, ಸಾವಿಗಿಂತಲೂ ಬಲಶಾಲಿಯಾದ ಇನ್ನೊಂದು ವಸ್ತುವಿದ್ದರೆ ಅದರಿಂದ ಸತ್ಯವಾನನ ಮರಣವನ್ನು ನಿವಾರಿಸಲು ಸಾಧ್ಯ ಎಂದು. ಆ ಮಾತು ನನಗೆ ಭರವಸೆ ಕೊಟ್ಟಿತು, ಧೈರ್ಯ ಕೊಟ್ಟಿತು. ನನ್ನಲ್ಲಿ ಸಾವಿಗಿಂತ ಬಲಶಾಲಿಯಾದ ವಸ್ತುವಿತ್ತು, ಅದೇ ಪ್ರೇಮ".



# ಏಳು ದಿನಗಳ ಕಾವಲು

ಹಸ್ತಿನಾಪುರದ ರಾಜನಾದ ಪರೀಕ್ಷಿತ್ ಮಹಾಬೇಟೆಗಾರನಾಗಿದ್ದ. ಆತ ಬೇಟೆಯನ್ನು ಪ್ರೀತಿಸುತ್ತಿದ್ದದ್ದು ಕೇವಲ ಅದರ ಖುಷಿ ಮೋಜುಗಳಿಗಾಗಿ ಮಾತ್ರವಲ್ಲ, ಕಾಡುಗಳಲ್ಲಿರುವ ದುಷ್ಟ ಮೃಗಗಳನ್ನು ನಾಶಮಾಡಿ ಅಲ್ಲಿ ವಾಸ ಮಾಡುವ ಜನ ನಿರ್ಭೀತಿಯಿಂದ ಸುಖದಿಂದ ಇರುವಂತೆ ನೋಡಿಕೊಳ್ಳುವುದೂ ಅವನಿಗೆ ಬೇಕಾಗಿತ್ತು.

ಒಂದು ದಿನ ಆತ ಬೇಟೆಗೆ ಹೋಗಿದ್ದಾಗ, ಒಂದು ಜಿಂಕೆಗೆ ಪೆಟ್ಟು ತಾಗಿ ಗಾಯವಾಯಿತು. ಆದರೆ ಪೆಟ್ಟು ಅದನ್ನು ಸಾಯಿಸುವಷ್ಟು ಪ್ರಬಲವಾಗಿರಲಿಲ್ಲ. ನಿಮಗೆ ಗೊತ್ತಿರಬೇಕು, ಬೇಟೆಯಲ್ಲಿ ಕೊಲ್ಲುವುದು ಧರ್ಮ, ಬರೀನೋಯಿಸುವುದು ಅಧರ್ಮ. ಒಂದು ಪ್ರಾಣಿಯನ್ನು ಗಾಯಗೊಳಿಸಿ ನರಳುವಂತೆ ಮಾಡಿದರೆ ಅದು ಅಮಾನುಷವಾದ ತಪ್ಪು ಎಂದು ತಿಳಿಯುತ್ತಾರೆ. ಆದ್ದರಿಂದ ರಾಜ ಆ ಜಿಂಕೆಯನ್ನು ಕೊಂದು ಅದರ ನೋವನ್ನು ತಪ್ಪಿಸಬೇಕೆಂದು ಅದನ್ನೇ ಅನುಸರಿಸುತ್ತ ಕಾಡಿನ ಒಳಕ್ಕೆ ಪ್ರವೇಶಿಸಿದ. ಸ್ವಲ್ಪ ಹೊತ್ತಲ್ಲಿ ಆತ ತನ್ನ ಜನರನ್ನು ಹಿಂದೆ ಬಿಟ್ಟು ಮುಂದೆ ಹೋಗಿ ಬಿಟ್ಟಿದ್ದ. ಅವನಿಗೆ ದಣಿವಾಗಿತ್ತು. ಹಸಿವು ಬಾಯಾರಿಕೆಗಳಾಗಿದ್ದವು. ಆದರೂ ಜಿಂಕೆಯನ್ನು ಕೊಲ್ಲದೆ ಹಿಂದಿರುಗುವುದಿಲ್ಲವೆಂದು ನಿರ್ಧಾರ ಮಾಡಿಕೊಂಡಿದ್ದ.

ಹಾಗೆ ಮುಂದೆ ಬಂದಾಗ ಕಾಡು ಕಡಿದು ಮಾಡಿದ್ದ ಚಿಕ್ಕ ಅಂಗಳ ಕಾಣಿಸಿತು. ಅಲ್ಲಿ ಒಬ್ಬ



ಮುದುಕ ತನ್ನ ಹಸುಗಳಿಗೆ ಹುಲ್ಲು ತಿನ್ನಿಸುತ್ತಿದ್ದ. ರಾಜ ಅವನ ಹತ್ತಿರ ಹೋಗಿ ಹೇಳಿದ: "ಮಿತ್ರ, ನಾನು ಅಭಿಮನ್ಯುವಿನ ಪುತ್ರ, ಈ ರಾಜ್ಯವನ್ನು ಆಳುತ್ತಿರುವವನು. ಗಾಯಗೊಂಡ ಒಂದು ಜಿಂಕೆಗಾಗಿ ಹುಡುಕುತ್ತಿದ್ದೇನೆ. ಅದು ಇಲ್ಲಿ ಬಂದಿತ್ತೇ? ನೀನು ಕಂಡೆಯಾ?".

ಆ ಮುದುಕನ ಹೆಸರು ಶಮೀಕ. ಆತ ಪೂಜ್ಯನಾಗಿದ್ದ ಒಬ್ಬ ಮುನಿ. ಯೋಗಾಯೋಗದಿಂದ ಆದಿನ ಆತ ಮೌನವ್ರತವನ್ನು ಕೈಕೊಂಡಿದ್ದ. ಆದಕಾರಣ ಆತ ರಾಜನ ಪ್ರಶ್ನೆಗೆ ಉತ್ತರ ಕೊಡಲಿಲ್ಲ. ಮೊದಲಿಗೆ ಈತನ ಮೌನವನ್ನು ಕಂಡು ರಾಜನಿಗೆ ಆಶ್ಚರ್ಯವಾಯಿತು. ಆಮೇಲೆ "ಈತ ಕಿವುಡನಿರಬಹುದು" ಎಂದು ಊಹಿಸಿ ದೊಡ್ಡ ದನಿಯಲ್ಲಿ ಕೂಗಿ ಪ್ರಶ್ನೆ ಮಾಡಿದ. ಶಮೀಕ ಉತ್ತರಿಸದೆ ರಾಜನನ್ನೇ ನೋಡುತ್ತ ನಿಂತ. ಆ ವೃದ್ಧ ಮುನಿ ಕಿವುಡನಲ್ಲವೆಂದು ರಾಜನಿಗೆ ಅಷ್ಟರಲ್ಲೇ ತಿಳಿಯಿತು; ಅಲ್ಲಿದ್ದ ಒಂದು ಹಸು ಹತ್ತಿರದ ಹಾಲಿನ ಬಿಂದಿಗೆಯನ್ನು ಒದ್ದಾಗ ಆ ಸದ್ದು ಕೇಳಿದ ಮುನಿ ಥಕ್ಕನೆ ತಿರುಗಿ ಅದನ್ನು ಬೀಳಿಸದಂತೆ ಎತ್ತಿಟ್ಟ.

ರಾಜ ತುಂಬ ಕೋಪಗೊಂಡ. "ಈ ಅರಣ್ಯವಾಸಿಗಳು ಉದ್ಧಟರಾಗಿ ಬೆಳೆಯುತ್ತಿದ್ದಾರೆ." ಎಂದುಕೊಂಡ. "ಇರಲಿ ಈತನಿಗೆ ತನ್ನ ತಪ್ಪು ತಿದ್ದಿಕೊಳ್ಳಲು ಇನ್ನೂ ಒಂದು ಅವಕಾಶ ಕೊಡುತ್ತೇನೆ". ಪುನಃ ಪರೀಕ್ಷಿತ್ ರಾಜ ಶಮೀಕನನ್ನೇ ಕಣ್ಣಿಟ್ಟು ನೋಡುತ್ತ ದೊಡ್ಡದಾಗಿ ಕೂಗಿ ಸ್ಪಷ್ಟವಾಗಿ ಹೇಳಿದ, ತತ್ಕ್ಷಣವೇ ತಕ್ಕ ಗೌರವದಿಂದ ಉತ್ತರ ಕೊಡದಿದ್ದರೆ ರಾಜನಾದ ತಾನು ಮುಂದಾಗುವ ಪರಿಣಾಮಗಳಿಗೆ ಜವಾಬ್ದಾರನಲ್ಲ ಎಂದು. ಶಮೀಕ ತಲೆಯಲ್ಲಾಡಿಸಿದ. ಆತ ಉತ್ತರ ಕೊಡಲು ನಿರಾಕರಿಸುತ್ತಿದ್ದಾನೆ ಎಂದು ರಾಜನಿಗೆ ಅನ್ನಿಸಿತು. ಆ ವೃದ್ಧ ಮುನಿಯ ಕಣ್ಣಲ್ಲಿ, ಕಾತರದ ನಿಸ್ಸಹಾಯಕ ದೃಷ್ಟಿಯಿದ್ದದ್ದು ರಾಜನಿಗೆ ಅರ್ಥವಾಗಲಿಲ್ಲ.

ರಾಜ ಬಾಲಿಶವಾದ ಕ್ರೋಧದಿಂದ, ಈ ಉದ್ಧಟ ತಪಸ್ವಿಯನ್ನು ಯಾವ ರೀತಿಯಲ್ಲಿ ಅವಮಾನಗೊಳಿಸಿ ಹದಮಾಡಲಿ ಎಂದು ಯೋಚಿಸುತ್ತ, ಸುತ್ತ ನೋಡಿದ. ಅಲ್ಲೇ ಹತ್ತಿರದಲ್ಲೇ

ಒಂದು ಸತ್ತ ಹಾವು ಬಿದ್ದಿದ್ದು ಕಾಣಿಸಿತು. ರಾಜ ತನ್ನ ಖಡ್ಗವನ್ನೆಳೆದು ಬೀಸಿದ; ಸತ್ತ ಹಾವು ಖಡ್ಗದ ಮೊನೆಗೆ ಚುಚ್ಚಿಕೊಂಡಿತು. ಮತ್ತೊಂದು ಕ್ಷಣದಲ್ಲಿ ಆ ಸತ್ತ ಹಾವು ಮೇಲಕ್ಕೆ ಹಾರಿ ಮೆಲ್ಲಗೆ ಕೆಳಕ್ಕಿಳಿದು ಬಂದು ಆ ವೃದ್ಧ ಶಮೀಕನ ಕೊರಳಲ್ಲಿ ಬಿದ್ದಿತು. ರಾಜ ತೃಪ್ತಿಯಿಂದ ನಕ್ಕ; ಮುನಿ ಕೋಪದಿಂದ ಕುದಿಯುತ್ತಾನೆ, ಬಹುಶಃ ಶಾಪ ಹಾಕಿದರೂ ಆಶ್ಚರ್ಯವಿಲ್ಲ ಎಂದು ಎಣಿಸಿದ.

ಶಮೀಕ ಏನೂ ಮಾಡಲಿಲ್ಲ. ಆತ ಮಹತ್ತರ ಕರುಣೆಯಿಂದ ರಾಜನ ಕಡೆ ನೋಡಿದ, ಅಷ್ಟೆ. ರಾಜನಿಗೆ ನಾಚಿಕೆಯಾಯಿತು. ಆ ಜಾಗ ಬಿಟ್ಟು ಹೊರಟು ನಡೆದ.

ರಾಜನಿಗೆ ಶಮೀಕನಿಗೆ ಇಬ್ಬರಿಗೂ ಗೊತ್ತಿಲ್ಲದಂತೆ, ಈ ದೃಶ್ಯವನ್ನು ಇನ್ನೊಬ್ಬ ನೋಡುತ್ತ ನಿಂತುಕೊಂಡಿದ್ದ, ಕೃಶ ಎನ್ನುವವ. ಶಮೀಕನಿಗೆ ಶೃಂಗಿ ಎಂಬ ಒಬ್ಬ ಮಗನಿದ್ದ. ಆತನ ಸ್ನೇಹಿತ ಈ ಕೃಶ. ರಾಜ ವೇಗದಿಂದ ಹಿಂದಿರುಗಿದ ಮೇಲೆ ಕೃಶ ಈ ಸುದ್ದಿಯನ್ನು ತಿಳಿಸಲು ಶೃಂಗಿಯ ಬಳಿಗೆ ನಡೆದ.





ಶೃಂಗಿಯನ್ನು ಕಂಡದ್ದೇ ಕೃಶ ಪ್ರಾರಂಭ ಮಾಡಿದ: "ಆ ದಿನ ನೀನು ಹೇಳಿದ್ದೆ, ಅರಣ್ಯವಾಸಿಗಳಾದ ನಮ್ಮ ಮೊದಲ ನಿಷ್ಠೆ ದೇವರಿಗೆ ಹಾಗೂ ಎರಡನೆಯದಾಗಿ ರಾಜನಿಗೆ ಎಂದು. ಅಲ್ಲವೆ ?"

"ಹೌದು" ಎಂದ ಶೃಂಗಿ, ಅಪರೂಪದ ಮೂಲಿಕೆಗಳನ್ನು ಸಂಗ್ರಹಿಸುವ ತನ್ನ ಕೆಲಸದಲ್ಲೇ ತಲ್ಲೀನನಾಗಿ, ವಿಮನಸ್ಕನಾಗಿ.

"ರಾಜ ನಮ್ಮನ್ನು ಗಣನೆಗೇ ತೆಗೆದುಕೊಳ್ಳದೆ ನಮಗೆ ಅವಮಾನ ಮಾಡಿದಾಗಲೂ, ನಾವು ರಾಜನಿಗೆ ನಿಷ್ಠರಾಗಿರಬೇಕು ಎನ್ನುತ್ತೀಯಾ?" ಕೃಶ ಪ್ರಶ್ನೆ ಹಾಕಿದ.

"ರಾಜ—ಅಂದರೆ ನಾನು ನಮ್ಮ ಪರೀಕ್ಷಿತ್ ರಾಜನ ಬಗ್ಗೆ ಹೇಳುತ್ತಿದ್ದೇನೆ—ಎಂದೂ ಅರಣ್ಯಕರಿಗೆ ಅವಮಾನ ಮಾಡುವುದಿಲ್ಲ. ಹಾಗೆ ಮಾಡಲು ಕಾರಣವಾದರೂ ಏನು?

ಕೃಶ ಕೊಂಚ ಕೀಟಲೆಗಾರ. ಪುನಃ ಕುಯುಕ್ತಿಯ ದನಿಯಲ್ಲಿ ಹೇಳಿದ: ಒಂದು ವೇಳೆ, ರಾಜ ನಮ್ಮಲ್ಲೊಬ್ಬರ ಅವಮಾನ ಮಾಡಿದ್ದನ್ನು ಕಣ್ಣಾರೆ ಕಂಡೆ ಎಂದು ನಾನೇ ಹೇಳಿದರೆ?"

"ನಾನು ನಿನ್ನ ಮಾತನ್ನು ನಂಬುವುದಿಲ್ಲ", ಎಂದ ಶೃಂಗಿ, ನೇರವಾಗಿ.

"ಒಂದು ವೇಳೆ—ಸಾಕ್ಷಿ ಸಮೇತವಾಗಿ ನೀನೇ ಅದನ್ನು ಕಂಡರೆ, ಆಗ ಏನನ್ನುತ್ತೀಯೆ?"

"ಸಾಕ್ಷಿ?" ಶೃಂಗಿ ತಾಳ್ಮೆ ಕಳೆದುಕೊಂಡ. ಎಂಥ ಒಗಟು ಹೇಳುತ್ತೀಯೆ? ನೇರವಾಗಿ ಹೇಳು, ಆಗ ನೀನು ಹೇಳಬೇಕೆಂದಿರುವ ಕಥೆ ನನಗೆ ಅರ್ಥವಾದೀತು."

"ಇದು ಕಥೆಯಲ್ಲ. ನೀನೇ ಬಾ ನೋಡುವಿಯಂತೆ" ಎಂದ ಕೃಶ. ಶೃಂಗಿಯನ್ನು ಶಮೀಕನಿದ್ದ ತಾಣಕ್ಕೆ ಕರೆದು ತಂದ. ಶಮೀಕನ ಕೊರಳಲ್ಲಿ ಆ ಸತ್ತ ಹಾವು ಹಾಗೇ ಇತ್ತು.

"ನನ್ನ ತಂದೆಯ ಕೊರಳಿಗೆ ಹಾವು ಸುತ್ತಿಕೊಂಡು ಬಿಟ್ಟಿದೆ" ಎನ್ನುತ್ತ ಶೃಂಗಿ ಮುಂದಕ್ಕೆ ಧಾವಿಸಿದ. ಅಷ್ಟರಲ್ಲಿ ಕೃಶ ಅವನನ್ನು ತಡೆದ.



"ಅದು ಸತ್ತ ಹಾವು" ಎಂದ ಕೃಶ. "ನಮ್ಮ ರಾಜ, ಮಹಾಪ್ರಭು ದಯಾಳುವಾದ ರಕ್ಷಕ—ನಿನ್ನ ಪ್ರಕಾರ, ಯಾರಿಗೆ ನಾವೆಲ್ಲರೂ ದೇವರನ್ನು ಬಿಟ್ಟರೆ ಎರಡನೆಯದಾಗಿ ನಿಷ್ಠೆ ಒಪ್ಪಿಸುತ್ತೇವೋ ಆತ—ಈಗ ಒಂದು ತಾಸಿನ ಹಿಂದಷ್ಟೇ ಇದನ್ನು ನಿನ್ನ ತಂದೆಯ ಕೊರಳಿಗಿಟ್ಟ. ಈ ಶಿಕ್ಷೆಗೆ ನಿನ್ನ ತಂದೆ ಮಾಡಿದ ಪ್ರಮಾದ ಏನಿರಬಹುದು ಊಹಿಸುತ್ತೀಯಾ? ಗಾಯಗೊಂಡ ಒಂದು ಜಿಂಕೆಯ ಬಗ್ಗೆ ಕೇಳಿದ್ದಕ್ಕೆ ಈತ ಉತ್ತರಿಸಲಿಲ್ಲ. ಆಗ ರಾಜ ನಿನ್ನ ತಂದೆಯ ಮೇಲೆ ರೇಗಿ ಕೂಗಿ ತನ್ನ ಖಡ್ಗದ ಮೊನೆಗೆ ಈ ಸತ್ತ ಹಾವು ಚುಚ್ಚಿಕೊಂಡದ್ದನ್ನು ಕಂಡ. ಮಹಾಪ್ರಭು ಖಡ್ಗವನ್ನು ಬಳಸುವ ರೀತಿ ಇದು. ಆಮೇಲೆ ಅದನ್ನು ಗುರಿಯಿಟ್ಟು ನಿನ್ನ ತಂದೆಯ ಕೊರಳಿಗೆ ಎಸೆದ. ಕೊರಳಿನ ಸುತ್ತ ಹಾರದ ಹಾಗೆ ಬಂದು ಕೂತಿತು. ನಾನೇ ನನ್ನ ಸ್ವಂತ ಕಣ್ಣುಗಳಿಂದ ಕಂಡೆ".

"ಆದರೆ" ಶೃಂಗಿ ಕೂಗಿದ, "ನೀನೇಕೆ ಮುಂದೆ ಹೋಗಿ ರಾಜನಿಗೆ ಹೇಳಲಿಲ್ಲ, ಈದಿನ ತಂದೆಗೆ ಮೌನವ್ರತ ಎನ್ನುವುದನ್ನು?"

"ಏನು?" ಎಂದು ಬೆರಗುತೋರಿಸಿದ ಕೃಶ. "ರಾಜ ಹಾಗೆ ಕೈಯಲ್ಲಿ ಒರೆಗಳಚಿದ ಖಡ್ಗ ಹಿಡಿದಿದ್ದಾಗ ಮತ್ತು ಆತನ ಮುಖ ಕ್ರೋಧದಿಂದ ಉರಿಯುತ್ತಿದ್ದಾಗ? ಬಹುಶಃ, ಆ ಖಡ್ಗ-ನನ್ನ ಕೊರಳನ್ನು ಚೆಂಡಾಡುತ್ತಿತ್ತು!"

ಪ್ರೇಮದಿಂದ ಹೆಮ್ಮೆಯಿಂದ ಶೃಂಗಿ ತನ್ನ ವೃದ್ಧ ತಂದೆಯನ್ನೇ ಕಣ್ಣಿಟ್ಟು ನೋಡಿದ. ಆ ಸತ್ತ ಹಾವು ಕಂಡು ವ್ಯಾಕುಲಕೊಂಡ. "ರಾಜ ನನ್ನ ತಂದೆಯನ್ನು ಅವಮಾನಿಸಿ ತಪ್ಪು ಮಾಡಿದ" ಯೋಚಿಸುತ್ತ ತನ್ನಷ್ಟಕ್ಕೇ ಹೇಳಿಕೊಂಡ. "ಈತನ ಮುಖದ ತೇಜಸ್ಸೂ ಅವನಿಗೆ ಕಾಣಲಿಲ್ಲವೆ? ಕಣ್ಣಲ್ಲಿದ್ದ ಪ್ರಸನ್ನತೆಯೂ ಕಾಣಿಸಲಿಲ್ಲವೆ?"

"ರಾಜರು ನೋಡಬಹುದು ಆದರೆ ಕಾಣಿಸಬೇಕಲ್ಲ" ಎಂದ ಕೃಶ. ತನಗೆ ರಾಜತ್ವದ ಬಗ್ಗೆ ಇದ್ದ ಅಸಮಾಧಾನವನ್ನು ಚುಟುಕದಲ್ಲಿ ವ್ಯಕ್ತ ಮಾಡಿದ.

ರಾಜನಿಂದಾದ ಅವಮಾನದ ಸಾಕ್ಷಿಯನ್ನು ಪ್ರತ್ಯಕ್ಷವಾಗಿ ಧರಿಸಿದ್ದ ತನ್ನ ತಂದೆಯನ್ನು ನೋಡಿ ಶೃಂಗಿಯ ಕೋಪ ಮತ್ತೆ ಮತ್ತೆ ಉಕ್ಕಿತು. ಕಡೆಯಲ್ಲಿ ಕೋಪ ತಡೆಯುವುದೇ ಅಸಾಧ್ಯ ವಾಗಿ ಅದು ಶಾಪರೂಪದಲ್ಲಿ ಅವನ ಬಾಯಿಂದ ಹೊರಟುಬಿಟ್ಟಿತು.

"ಅವನು ರಾಜನೇ ಇರಬಹುದು, ಆದರೆ ಪೂಜ್ಯನಾದ ನನ್ನ ತಂದೆಯ ಮೇಲೆ ಸತ್ತ ಹಾವನ್ನೆಸೆಯುವುದಕ್ಕೆ ಅವನಿಗೆ ಎಂಥ ಧೈರ್ಯ. ಅವನು ನನ್ನ ತಂದೆಯನ್ನಷ್ಟೇ ಅಲ್ಲ, ಈತನಿಗೆ ಯಾವತ್ತೂ, ಯಾವ ರೀತಿಯಲ್ಲೂ ತೊಂದರೆ ಕೊಡದೆ ಕಾಡಿನಲ್ಲಿ ವಾಸಿಸುತ್ತಿರುವವರನ್ನೆಲ್ಲ



ಅವಮಾನಗೊಳಿಸಿದ್ದಾನೆ. ನಾನು ಆತನನ್ನು ಶಪಿಸುತ್ತೇನೆ! ಹಸ್ತಿನಾಪುರದ ರಾಜವಂಶಕ್ಕೇ ಕಲಂಕ ಹಚ್ಚಿದ ಈ ರಾಜನನ್ನು ಏಳು ದಿನಗಳೊಳಗಾಗಿ ನಾಗರಾಜನಾದ ತಕ್ಷಕನು ಮೃತರ ರಾಜ್ಯಕ್ಕೆ ಕೊಂಡೊಯ್ಯಲಿ!"

ಶೃಂಗಿಯ ತಂದೆ ಈ ಶಾಸನವನ್ನು ಕೇಳಿ ತನ್ನ ಧ್ಯಾನದಿಂದ ವಿಚಲಿತನಾಗಿ, ಭಯದಿಂದ ತಲ್ಲಣಗೊಂಡು ತನ್ನ ಮಗನ ಮುಖವನ್ನು ನೋಡಿದ. ತನ್ನ ಮಗ ಹೀಗೆ ಮಾಡಿದಕ್ಕಾಗಿ ವ್ಯಾಕುಲಗೊಂಡು, ತನ್ನ ಮೌನವ್ರತವನ್ನು ಕೂಡ ಮುರಿದು ಗೋಳಾಡಿದ: ''ನನ್ನ ಪುತ್ರನಾದ ಶೃಂಗಿ, ಏನು ಮಾಡಿಬಿಟ್ಟೆ? ನಮ್ಮೆಲ್ಲರನ್ನೂ ಸದಾಕಾಲವೂ ರಕ್ಷಿಸುತ್ತ ಬಂದ ಹಾಗೂ ಈ ಕಾಡಿನಲ್ಲಿ ನಾವು ನೆಮ್ಮದಿಯಿಂದ ಬದುಕಲು ಸಾಧ್ಯಮಾಡಿಕೊಟ್ಟ ರಾಜಶ್ರೇಷ್ಠನಾದ ಪರೀಕ್ಷಿತನನ್ನು ಶಪಿಸಿಬಿಟ್ಟೆ. ನಿನಗೆ ಯಾರು ಹುಚ್ಚು ಹಿಡಿಸಿದರು? ಇದು ಸಾಧುಗಳು ನಡೆದುಕೊಳ್ಳಬೇಕಾದ ರೀತಿಯೆ? ನಿನ್ನ ಈ ಕ್ರೋಧದ ಧಾವರಿತವನ್ನು ಹಿಂಬಾಲಿಸಿ ಎಂತಹ ಗೊಂದಲ ಉತ್ಪಾತಗಳು ಉಂಟಾಗುತ್ತವೆಯೋ ದೇವರೇ ಬಲ್ಲ. ಪರೀಕ್ಷಿತನನ್ನು ಶಪಿಸಿ ನೀನು ಒಬ್ಬ ರಾಜನನ್ನು ಮಾತ್ರವಲ್ಲ, ಇಡೀ ರಾಜ್ಯವನ್ನೇ ನಿರ್ನಾಮ ಮಾಡಿಬಿಟ್ಟೆ. ಎಂಥ ಸಂದರ್ಭದಲ್ಲೂ ಇದು ತಪ್ಪು. ಅದೂ ಇಂಥ ಶಿಕ್ಷೆಗೆ ಸರ್ವಥಾ ಅರ್ಹನಲ್ಲದ ಪರೀಕ್ಷಿತ್ ರಾಜ ಮತ್ತು ಹಸ್ತಿನಾಪುರದ ಸಾಮ್ರಾಜ್ಯ ಇವುಗಳ ದೃಷ್ಟಿಯಿಂದಂತೂ ಇದು ದೊಡ್ಡ ಪ್ರಮಾದವೇ ಸರಿ!"

ಶೃಂಗಿ ನಾಚಿಕೆಯಿಂದ ತಲೆತಗ್ಗಿಸಿದ.

"ಅಯ್ಯೋ, ನೀನು ಶಾಪವನ್ನು ಉಪಸಂಹರಿಸಲೂ ಶಕ್ತನಲ್ಲ." ತಂದೆ ದುಃಖಿಸಿದ. "ನೀನು ಆಡಿದ್ದೆಲ್ಲ ಸಂಭವಿಸಿ ಬಿಡುತ್ತದೆ; ಅಂಥ ಶಕ್ತಿ ನಿನ್ನಲ್ಲಿದೆ. ಅದಕ್ಕಾಗಿಯೇ ನಾನು ನಿನಗೆ ಮೇಲಿಂದ ಮೇಲೆ ಎಚ್ಚರಿಸುತ್ತಿದ್ದೆ—ಕೋಪವನ್ನು ನಿಯಂತ್ರಣದಲ್ಲಿಟ್ಟುಕೋ ಎಂದು, ಆಡುವ ಮೊದಲು ನೂರು ಸಲ ಯೋಚಿಸಿಕೋ ಎಂದು!"

ಶಮೀಕ ಕೆಲಹೊತ್ತು ಯೋಚನೆಯಲ್ಲೇ ಮುಳುಗಿ ಹೋದ. ಆಮೇಲೆ ತ್ವರೆಯಿಂದ ಮೇಲೆಕ್ಕೆದ್ದು ಹೇಳಿದ: "ಈ ಕ್ಷಣವೇ ಗುರು ಮುಖಿಯನ್ನು ನನ್ನ ಕಡೆ ಕಳಿಸು. ಈ ಕೂಡಲೇ ನಾನು ಆತನನ್ನು ಅರಮನೆಗೆ ಕಳಿಸಬೇಕು. ಆತ ಈ ಶಾಪದ ಸಂಗತಿಯನ್ನು ರಾಜನಿಗೆ ಹೇಳಿ ಆತ ಎಚ್ಚರದಿಂದಿರುವಂತೆ ತಿಳಿಸಲಿ."

ಪರೀಕ್ಷಿತ್ ರಾಜ ಗುರುಮುಖಿಯ ಮೂಲಕ ಬಂದ ಸಂದೇಶವನ್ನು ಮೌನವಾಗಿ ಕೇಳಿದ. "ಹಾಗಿದ್ದರೆ, ಅದು ಆ ವೃದ್ಧ ತಪಸ್ವಿಯ ಮೌನವ್ರತದ ದಿನವಾಗಿತ್ತು" ಎಂದು ತನ್ನಷ್ಟಕ್ಕೇ ಹೇಳಿಕೊಂಡ, ವ್ಯಸನದಿಂದ. "ನಾನು ಅದನ್ನು ಊಹಿಸಿಕೊಳ್ಳಬೇಕಾಗಿತ್ತು. ತಪ್ಪು ನನ್ನದೇ



ಸಂಶಯವಿಲ್ಲ. ಈಗಲೂ ನನಗೆ ಎಚ್ಚರಿಕೆ ಹೇಳಿ ಕಳಿಸಿದ್ದು ಆ ಶಮೀಕನ ಕರುಣೆಗೆ ಸಾಕ್ಷಿಯಾಗಿದೆ. ಆತನಿಗೆ ನನ್ನ ಗೌರವವನ್ನೂ ಕೃತಜ್ಞತೆಯನ್ನೂ ಸೂಚಿಸಿದ್ದೇನೆಂದು ತಿಳಿಸು."

ರಾಜ ಗುರುಮುಖಿಯನ್ನು ಬೀಳ್ಕೊಟ್ಟು ಕೂಡಲೇ ತನ್ನ ಮಂತ್ರಿಗಳಿಗೆ ಹೇಳಿ ಕಳಿಸಿದ, ಮುಂದೇನು ಮಾಡಬೇಕೆಂಬುದನ್ನು ಅವರಲ್ಲಿ ಆಲೋಚಿಸಲು. ಮಂತ್ರಿಗಳು ಬರುವುದಕ್ಕೆ ಮೊದಲೇ ಎಂಥ ಮಹಾಸರ್ಪ ಕಡಿದರೂ ಅದಕ್ಕೆ ತಕ್ಕ ಮದ್ದು ಕೊಡಬಲ್ಲ ಬ್ರಾಹ್ಮಣನಾಗಿದ್ದ ಕಶ್ಯಪನಿಗೆ ಕರೆಕೊಟ್ಟು ಕಳುಹಿಸಿದ, ತತ್ಕ್ಷಣ ದಲ್ಲಿಯೇ ಅರಮನೆಗೆ ಬರಬೇಕೆಂದು.

ಮಂತ್ರಿ ಸಂಪುಟದ ತೀರ್ಮಾನದ ಮೇರೆ, ವಾಸ್ತು ಶಿಲ್ಪಿಗಳು ಗೃಹನಿರ್ಮಾಪಕರು ಕರ್ಮ

ಕಾರರು ಎಲ್ಲ ಅರಮನೆಗೆ ಧಾವಿಸಿ ಬಂದರು. ರಾತ್ರಿ ಕಳೆಯುವುದರೊಳಗೆ ಅರಮನೆಯ ಅಂಗಳದಲ್ಲಿ ಒಂದು ವಿಲಕ್ಷಣ ಕಟ್ಟಡ ಸಿದ್ಧವಾಯಿತು. ಒಂದು ಬೃಹದಾಕಾರದ ಎತ್ತರದ ಸ್ತಂಭ, ಅದರ ಮೇಲುಭಾಗದಲ್ಲಿ ಒಂದು ಕೋಣೆ. ಈ ಕೋಣೆಯಲ್ಲಿ ರಾಜ ವಾಸ್ತವ್ಯ ಮಾಡಿದ. ಸ್ತಂಭದ ಕೆಳಭಾಗದಲ್ಲಿ ಸುತ್ತಲೂ ಮತ್ತು ಬಾಗಿಲುಗಳಲ್ಲಿ ಶಸ್ತ್ರಸಜ್ಜಿತರಾದ ಸೈನಿಕರು ಕಾವಲು ನಿಂತರು. ಒಂದು ಎರೆಹುಳು ಕೂಡ ರಾಜನ ಸಮೀಪ ಹೋಗುವ ಹಾಗಿರಲಿಲ್ಲ. ರಾಜನ ಸಂಸಾರ ಮತ್ತು ಮಂತ್ರಿವರ್ಗ ಬಿಟ್ಟು ಮತ್ತೆ ಯಾರಿಗೂ ಅಲ್ಲಿ ಪ್ರವೇಶ ಮಾಡಲು ಅಪ್ಪಣೆ ಇರಲಿಲ್ಲ.

ಕಶ್ಯಪ ರಾಜನ ಆಜ್ಞೆಗೆ ತಲೆಬಾಗಿ ತ್ವರೆಯಿಂದ ಬರುತ್ತಿರುವಾಗ, ಹಾದಿಯಲ್ಲಿ ಒಬ್ಬ ವೃದ್ಧ ಬೇಸರದಿಂದ ಕೂತಿದ್ದನ್ನು ಕಂಡ.

"ಮಿತ್ರ, ಏನಾಗಿದೆ ನಿನಗೆ? ಯಾಕೆ ಮಂಕನಾಗಿ ಕೂತಿದ್ದೀಯೆ?" ಎಂದು ಪ್ರಶ್ನೆ ಮಾಡಿದ.

"ಬದುಕಿನಲ್ಲಿರುವ ಅನ್ಯಾಯ" ಎಂದು ನಿಡುಸುಯ್ದ ಆ ವೃದ್ಧ. "ನೀನೀಗ ಅರಮನೆಗೆ ಹೋಗುತ್ತಿದ್ದೀಯೆ. ನಿನಗೆ ಎಲ್ಲ ಬಾಗಿಲುಗಳು ತೆರೆದಿರುತ್ತವೆ. ನನಗೂ ಅರಮನೆಗೆ ಹೋಗುವ ಆಸೆ. ಆದರೆ ನನಗೆ ಮಾತ್ರ ಒಂದು ಬಾಗಿಲೂ ತೆರೆಯುವುದಿಲ್ಲ."

"ನಿನಗೆ ರಾಜನನ್ನು ಕಾಣುವ ಆಸೆಯೆ?"

"ಹೌದು."



"ತಕ್ಷಕ ರಾಜನನ್ನು ಕಡಿದು ಕೊಲ್ಲುವನೆಂಬ ಭಯಕ್ಕಾಗಿ, ರಾಜನನ್ನು ವಿಷದಿಂದ ಪಾರು ಮಾಡಲು ನನಗೆ ಹೇಳಿ ಕಳಿಸಿದ್ದಾರೆ. ನಿನಗೆ ಅಲ್ಲಿ ಯಾವ ಕೆಲಸವಿದೆ?"

"ಅವನನ್ನು ಕೊಲ್ಲುವುದು" ಎಂದು ಆತ ಮೇಲಕ್ಕೆದ್ದ. ಕೂಡಲೇ ತನ್ನ ನಿಜರೂಪವನ್ನು ತಾಳಿದ. ಅವನೇ ನಾಗರಾಜನಾದ ತಕ್ಷಕನಾಗಿದ್ದ.

ಪರಸ್ಪರ ಕುಶಲವಾದ ಮೇಲೆ ಕಶ್ಯಪ ಹೇಳಿದ: "ಇದೀಗ ಬಹಳ ಕಷ್ಟದ ಪ್ರಸಂಗ. ನೀನು ರಾಜನನ್ನು ಕೊಲ್ಲುವವನಿದ್ದೀಯೆ; ನಾನು ಆತನನ್ನು ಬದುಕಿಸಲಿದ್ದೇನೆ. ನಾವೀಗ ಒಟ್ಟಿಗೆ ಹೋಗುವುದೋ, ಬೇರೆ ಬೇರೆಯಾಗಿ ಹೋಗುವುದೋ?"

ತಕ್ಷಕ ಕೇಳಿದ: "ರಾಜನನ್ನು ನನ್ನ ವಿಷದಿಂದ ಉಳಿಸಿಕೊಳ್ಳಬಲ್ಲೆ ಎಂಬ ಧೈರ್ಯವುಂಟೆ?"

"ಹೌದು" ಎಂದ ಕಶ್ಯಪ ಅಳುಕೇ ಇಲ್ಲದೆ.

"ಹಾಗಾದರೆ ಸಮರ್ಥಿಸಿ ತೋರಿಸುತ್ತೀಯಾ?" ಎಂದು ತಕ್ಷಕ ಸವಾಲು ಹಾಕಿದ. "ಈಗ ನಾನು ಈ ಗಿಡವನ್ನು ಕಡಿಯುತ್ತೇನೆ. ಅದು ಕೂಡಲೇ ಸಾಯುತ್ತದೆ. ನೀನು ಅದನ್ನು ಬದುಕಿಸಬಲ್ಲೆಯಾ ನೋಡೋಣ."

ನಾಗರಾಜ ಕೂಡಲೇ ತನ್ನ ಕವರು ನಾಲಗೆಯನ್ನು ಹೊರಕ್ಕೆ ಸುಗಿದು ಆ ಗಿಡದ ಕಾಂಡಕ್ಕೆ ವಿಷ ಚುಚ್ಚಿದ. ಕೆಲವೇ ನಿಮಿಷಗಳಲ್ಲಿ ಆ ಗಿಡ ಬೂದಿಯಾಗಿ ಹೋಯಿತು.

"ಈಗ ನಿನ್ನ ಸರದಿ" ಎಂದ ತಕ್ಷಕ, ಕಶ್ಯಪನಿಗೆ.

ಕಶ್ಯಪ ಆ ಬೂದಿಯನ್ನು ಒಂದು ಕೈತುಂಬ ತುಂಬಿಕೊಂಡು ಧ್ಯಾನಮಗ್ನನಾಗಿ ಕಣ್ಣು ಮುಚ್ಚಿದ. ಆಮೇಲೆ ಮೊದಲು ಅದನ್ನು ಎತ್ತಿಕೊಂಡ ಜಾಗಕ್ಕೇ ಹೋಗಿ ಅದನ್ನು ಹುಗಿದ. ಕೆಲವೇ ಕ್ಷಣಗಳಲ್ಲಿ ಒಂದು ಹಸಿರು ಮೊಳಕೆ ಕಾಣಿಸಿತು; ಆಮೇಲೆ ಎರಡು ಚಿಗುರು ಎಲೆಗಳು ಮೂಡಿದವು; ಹಾಗೇ ಅವರ ಕಣ್ಣೆದುರಿನಲ್ಲೇ ಒಂದು ತೆಳುವಾದ ಕಾಂಡ ಮೇಲಕ್ಕೆದ್ದು ನೇರವಾಗಿ ಉದ್ದವಾಗಿ ಬೆಳೆದುಕೊಂಡಿತು; ಹೊಸ ಹೊಸ ಎಲೆಗಳು ಚಿಗುರಿಕೊಂಡವು; ಕೊನೆಯಲ್ಲಿ ಇಡೀ ಗಿಡ ಬೆಳೆದು ನಿಂತಿತ್ತು ಮೊದಲಿದ್ದ ಹಾಗೇ.

ತಕ್ಷಕ ಈ ಮಾಂತ್ರಿಕನನ್ನು ಕಂಡ. ಮೊದಲು ಆಶ್ಚರ್ಯವಾಯಿತು. ಆಮೇಲೆ ಉದಾಸೀನನಾದ. ಇಂಥ ಮಾಟ ಅವನಿಗೆ ಹೊಸದಲ್ಲ. ಸಾಧುಗಳು ಮುನಿಗಳು ಕಾಡಿನಲ್ಲಿ ಹೀಗೆ ವಿಲಕ್ಷಣ

ಮಾತುಗಳನ್ನೂ ಕುತೂಹಲಕಾರಿಯಾದ ಅದ್ಭುತಗಳನ್ನೂ ಮಾಡುತ್ತಿದ್ದುದನ್ನು ಆತ ಮೇಲಿಂದ ಮೇಲೆ ಕಂಡದ್ದಿತ್ತು.

"ಈ ಸಂದರ್ಭದಲ್ಲಿ ನೀನು ಜಯಶಾಲಿಯಾಗಿರುವೆ ಎಂದು ನಾನು ಒಪ್ಪಿಕೊಳ್ಳುತ್ತೇನೆ." ಎಂದು ಕಶ್ಯಪನಿಗೆ ಹೇಳಿದ. "ಆದರೆ ನೀನು ಪರೀಕ್ಷಿತ್ ರಾಜನ ವಿಚಾರದಲ್ಲಿ ಮಾತ್ರ ನನ್ನ ವಿರುದ್ಧವಾಗಿ ನಿನ್ನ ಶಕ್ತಿಯನ್ನು ಉಪಯೋಗಿಸಕೂಡದು."

"ಯಾಕೆ?" ಎಂದ ಕಶ್ಯಪ ಶಾಂತನಾಗಿ.

ಸರ್ಪರಾಜ ಹೇಳಿದ: "ಮೊದಲು ನಾನು ನಿನಗೊಂದು ಪ್ರಶ್ನೆ ಹಾಕುತ್ತೇನೆ. ವಿಧಿಗೆ ಅಧೀನವಾಗಿ ನಡೆಯುತ್ತಿರುವ ಜಗತ್ತಿನಲ್ಲಿ ಈ ವಿಧಿಯ ಕೆಲಸ ಕಾರ್ಯಗಳಲ್ಲಿ ನಾವು ಮಧ್ಯೆ ಕೈಹಾಕಲು ಯತ್ನಿಸುವುದು ಸರಿಯೆನ್ನುತ್ತೀಯಾ?"

"ಅಲ್ಲ" ಎಂದ ಕಶ್ಯಪ ತತ್‌ಕ್ಷಣವೇ. "ಆದರೆ ಪರೀಕ್ಷಿತ್ ರಾಜನ ವಿಷಯದಲ್ಲಿ ಶಾಪ ವಿಧಿಗೆ ವಿರುದ್ಧವಾಗಿ ಬಂದಿದೆ."

"ತಪ್ಪು ತಿಳಿದಿದ್ದೀಯೆ" ಎಂದ ತಕ್ಷಕ ಗಂಭೀರನಾಗಿ. "ನನ್ನನ್ನು ಕಳಿಸಿರುವುದು ರಾಜನಿಗೆ ಅಕಾಲಿಕವಾದ ಮರಣವನ್ನು ತರುವುದಕ್ಕಲ್ಲ. ಅವನ ವಿಧಿಲಿಖಿತವನ್ನು ಪೂರೈಸುವುದಕ್ಕೆ ಅಷ್ಟೆ.



ನನ್ನನ್ನು ಕಳಿಸಿದ್ದು ಮೃತ್ಯುದೇವತೆ. ರಾಜನ ಆಯುಷ್ಯ ಲಿಖಿತವನ್ನು ನೋಡಿ ಅದರ ಪ್ರಕಾರವೇ ನನ್ನನ್ನು ಕಳಿಸಿದ್ದಾನೆ. ಶಮೀಕನ ಪುತ್ರನಾದ ಶೃಂಗಿಯ ಬಾಯಲ್ಲಿ ಬಂದದ್ದು ನಿಜವಾಗಿ ಶಾಪವಲ್ಲ, ವಿಧಿಲಿಖಿತ ಮಾತ್ರ."

ಕಶ್ಯಪ ಯೋಚನಾ ಮಗ್ನನಾಗಿ ನಿಂತ. ಕಡೆಯಲ್ಲಿ ಕೇಳಿದ: "ಪರೀಕ್ಷಿತ್ ಏಳು ದಿನಗಳೊಳಗಾಗಿ ಸಾಯಬೇಕೆಂಬುದು ವಿಧಿಲಿಖಿತವೆ? ಒಂದು ವೇಳೆ ಶೃಂಗಿ ಶಪಿಸದಿದ್ದರೂ ಆತ ಸಾಯುತ್ತಿದ್ದನೆ?"

"ಅದರಲ್ಲಿ ಸಂದೇಹವೇ ಇಲ್ಲ".

"ಹಾಗಿದ್ದರೆ ನಾನು ಮಧ್ಯೆ ಬರುವುದಿಲ್ಲ" ಎಂದು ಹೇಳಿ ಕಶ್ಯಪ ತನ್ನ ಆಶ್ರಮಕ್ಕೆ ಹಿಂತಿರುಗಿ ನಡೆದ.

ತಕ್ಷಕ ರಾಜನಿದ್ದಲ್ಲಿಗೆ ಹೋಗಿ ಸೇರುವುದು ಹೇಗೆ ಎಂದು ಬಹಳ ಹೊತ್ತು ಯೋಚಿಸಿದ. ಕಡೆಗೂ ಶೃಂಗಿ ವಿಧಿಸಿದ್ದ ಏಳು ದಿನಗಳ ಅವಧಿಯಲ್ಲಿ ಏಳನೆಯ ದಿನ ಆತನಿಗೆ ಒಂದು ಉಪಾಯ ಹೊಳೆಯಿತು. ಆತ ತನ್ನ ಲೋಕದ ಕೆಲವು ಪ್ರಜೆಗಳಿಗೆ ಹೇಳಿಕಳಿಸಿ ಕರೆಸಿಕೊಂಡ. ಅವರಿಗೆ ಸೂಚನೆಗಳನ್ನು ಕೊಟ್ಟ.

"ರಾಜ ದುರ್ಭೇದ್ಯವಾದ ರಕ್ಷಣೆಯಲ್ಲಿದ್ದಾನೆ," ತಕ್ಷಕ ಎಚ್ಚರಿಸಿದ. "ಅತ್ಯಂತ ಚತುರ ಉಪಾಯದಿಂದ ಮಾತ್ರವೇ ನಮ್ಮ ಗುರಿಯನ್ನು ಸಾಧಿಸಲು ಸಾಧ್ಯ."

ಇತ್ತ ಪರೀಕ್ಷಿತ್ ರಾಜನೂ ಆತನ ಪರಿವಾರ ಮತ್ತು ಮಂತ್ರಿ ವರ್ಗದವರೂ ಶಾಪದ ಏಳು ದಿನಗಳಲ್ಲಿ ಆರು ದಿನಗಳು ಅಪಾಯವಿಲ್ಲದೆ ಕಳೆದಿದ್ದಕ್ಕಾಗಿ ಪರಸ್ಪರ ಅಭಿನಂದಿಸಿಕೊಳ್ಳು-ತ್ತಿದ್ದರು. ಈಗ ಏಳನೆಯ ದಿನವೂ ತುದಿ ಮುಟ್ಟುತ್ತಿತ್ತು. ಸಂಜೆ ಸೂರ್ಯಾಸ್ತಕ್ಕೆ ಸರಿಯಾಗಿ ಶಾಪ ಮುಗಿಯುತ್ತಿತ್ತು. ಮತ್ತು ಅದಕ್ಕೆ ಇನ್ನು ಕೆಲವೇ ತಾಸುಗಳು ಮಾತ್ರ ಉಳಿದಿದ್ದವು. ಕಶ್ಯಪ ಯಾಕೆ ಬರಲಿಲ್ಲವೆಂದು ರಾಜನಿಗೆ ಆಶ್ಚರ್ಯವಾಯಿತು. ಆದರೆ, ಸದ್ಯ ಭದ್ರವಾದ ರಕ್ಷಣೆ ಇದ್ದುದ್ದಕ್ಕಾಗಿ ಈ ತನಕವೂ ಆತನ ಅಗತ್ಯವೇ ಒದಗಿರಲಿಲ್ಲ.

ಆದಿನ ಸಂಜೆ ತುಂಬ ಹೊತ್ತಾಗಿ ಕೆಲವು ಸಂನ್ಯಾಸಿಗಳು ಆ ಸ್ತಂಭದ ಬುಡದಲ್ಲಿ ಕಾಣಿಸಿಕೊಂಡರು. "ನಾವು ದೂರದಿಂದ ಬಂದಿದ್ದೇವೆ. ರಾಜನಿಗೆ ಹೂವು ಹಣ್ಣುಗಳನ್ನು ತಂದಿದ್ದೇವೆ" ಎಂದು ರಕ್ಷಕರಲ್ಲಿ ಅರಿಕೆ ಮಾಡಿಕೊಂಡರು.

ರಕ್ಷಕರು ಅವರನ್ನು ಎಚ್ಚರದಿಂದ ಪರೀಕ್ಷಿಸಿದರು. ಆ ಮೇಲೆ ಅವರ ಬಟ್ಟೆಗಳನ್ನೂ ಹಣ್ಣಿನ ಬುಟ್ಟಿಗಳನ್ನೂ ತಪಾಸಣೆ ಮಾಡಿದರು. ಯಾವುದೇ ಸಂದೇಹಕ್ಕೆ ಕಾರಣವಿಲ್ಲವೆಂದು ನಿರ್ಧಾರವಾದ ಮೇಲೆ ಅವರನ್ನು ರಾಜನ ಬಳಿಗೆ ಬಿಟ್ಟರು.

"ಶಾಪ ಮುಗಿದು ಹೋಯಿತು. ಇನ್ನು ಈ ಸಂನ್ಯಾಸಿಗಳನ್ನು ಒಳಗೆ ಬಿಟ್ಟರೆ ಅದರಿಂದ ಏನೂ ತೊಂದರೆಯಾಗಲಾರದು" ಎಂದು ಅವರು ತಮ್ಮಲ್ಲೇ ಯೋಚಿಸಿಕೊಂಡರು. ಕಾಷಾಯ ವಸ್ತ್ರ ಧರಿಸಿದ ಆ ಸಂನ್ಯಾಸಿಗಳು ಒಳಗೆ ಹೋಗಿ ರಾಜನಿಗೆ ಹಣ್ಣು ಒಪ್ಪಿಸಿ ಕೂಡಲೇ ಹಿಂದಿರುಗಿ-ದರು. ಮುಂದೆ ಅವರು ಅರಮನೆಯ ಆವರಣ ಬಿಟ್ಟು ಕಾಡುಸೇರಿ, ಅಲ್ಲಿ ಸರ್ಪಗಳ ತಮ್ಮ ನಿಜವಾದ ರೂಪ ಧರಿಸಿ ಹಸಿರು ಹುಳುವಿನಲ್ಲಿ ಮರೆಯಾದರು.

ಸೂರ್ಯಾಸ್ತದ ಸಮಯ ಹತ್ತಿರವಾದಂತೆ ರಾಜ ಸನ್ನಿಧಿಯಲ್ಲಿ ಹರ್ಷೋತ್ಸವವಾಯಿತು. ಕೆಲವು ಕ್ಷಣಗಳಲ್ಲಿ ಶಾಪದ ಅವಧಿ ಮುಗಿಯಲಿತ್ತು, ಶಾಪದ ಆಪತ್ತಿನಿಂದ ಗೆದ್ದು ನಿಲ್ಲಲ್ಲಿದ್ದ ರಾಜ.

ರಾಜ ತನ್ನ ಪರಿವಾರದವರನ್ನೂ ಮಂತ್ರಿಗಳನ್ನೂ ಕರೆದ. "ಸೂರ್ಯಾಸ್ತವಾಗುತ್ತಿದೆ. ಬನ್ನಿ. ದಯಾಳುಗಳಾದ ಆ ಸನ್ಯಾಸಿಗಳು ಕೊಟ್ಟ ಹಣ್ಣುಗಳನ್ನು ಹಂಚಿ ತಿನ್ನೋಣ."

ಎಲ್ಲರು ಅಲ್ಲಿ ಸುತ್ತ ಸೇರಿಕೊಂಡರು. ತಮ ತಮಗೆ ಬೇಕಾದ ಹಣ್ಣುಗಳನ್ನು ಆಯ್ದು ಕೊಂಡರು. ರಾಜನ ಹಸ್ತ ಕೆಂಪು ಹೊಳೆಯುತ್ತಿದ್ದ ಒಂದು ಮಾವಿನ ಹಣ್ಣಿಗೆ ಚಾಚಿತು. ಅದನ್ನೆತ್ತಿ ತಿನ್ನತೊಡಗಿದ. ತುಂಬ ರುಚಿಯಾಗಿತ್ತು. ಹಾಗೇ ತಿನ್ನುತ್ತಿದ್ದಾಗ ಅದರಲ್ಲಿ, ಒಳಗಿನ ಬೀಜಕ್ಕೆ ತಾಗಿ ಒಂದು ಸಣ್ಣ ಹುಳು ಕಾಣಿಸಿತು. ಅದು ವಿಶೇಷವೇನಲ್ಲ. ಒಳ್ಳೆಯ ಮಾವಿನ ಹಣ್ಣಿನಲ್ಲಿ ಬೀಜದ ಬಳಿ ಹುಳು ಇರುವುದು ಸಾಮಾನ್ಯವೇ. ರಾಜ ನೋಡಿ ನಕ್ಕ. ಅತ್ತ ಕಿಟಕಿಯ ಕಡೆ ತಿರುಗಿ ಸೂರ್ಯಾಸ್ತವಾಗುತ್ತಿದ್ದುದನ್ನು ನೋಡಿದ.

"ತಕ್ಷಕ ಇನ್ನು ಬರುವುದಕ್ಕೆ ಸಮಯವೂ ಇಲ್ಲ" ಎಂದ. ಹಣ್ಣಿನಲ್ಲಿ ಕಂಡ ಆ ಚಿಕ್ಕ ಹುಳುವನ್ನು ಉದ್ದೇಶಿಸಿ ಹೇಳಿದ, "ಎಲೈ ಹುಳುವೆ; ನಿನ್ನ ರಾಜ ತಕ್ಷಕ ತನ್ನ ಕರ್ತವ್ಯದಲ್ಲಿ ಚ್ಯುತನಾದದ್ದೇಕೆ? ನಿನಗೆ ಕಾರಣ ಗೊತ್ತೆ? ಪಾಪ ನೀನೇನು ಹೇಳಬಲ್ಲೆ, ತಕ್ಷಕನೇ ಹೇಳಬೇಕು !"

ಇಷ್ಟು ಮಾತು ಉಚ್ಚರಿಸಿದ್ದಷ್ಟೇ, ಅಷ್ಟರಲ್ಲಿ ಆತನ ಕಣ್ಣೆದುರೇ ಆ ಚಿಕ್ಕ ಹುಳು ಬೆಳೆದು ಬೆಳೆದು ಮಹಾಸರ್ಪವಾಗಿಬಿಟ್ಟಿತ್ತು. ರಾಜನ ಕಣ್ಣುಗಳು ಭಯ ವಿಹ್ವಲವಾದವು. ಸೂರ್ಯ ಬಿಂಬದ ತುದಿಗೆರೆ ಪಶ್ಚಿಮದಿಗಂತದಲ್ಲಿ ಅದ್ದಿಹೋಗುತ್ತಿದ್ದಾಗ, ತಕ್ಷಕ ಭಯಂಕರವಾದ ವಿಸ್ತಾರವಾದ ತನ್ನ ಹೆಡೆಯನ್ನೆತ್ತಿ, ಕವರು ನಾಲಗೆಯನ್ನು ಮಿಂಚಿನಂತೆ ಹೊಳೆಸಿ ಪರೀಕ್ಷಿತ್ ರಾಜನನ್ನು ಕುಟುಕಿ ಬಿಟ್ಟ.



## ಉಪಮನ್ಯು ಕಲಿತ ಪಾಠ

ಹಿಂದೆ, ಬಹಳ ಹಿಂದೆ ಅಯೋದ್ಯ ಧೌಮ್ಯ ಎಂಬ ಒಬ್ಬ ಆಚಾರ್ಯನಿದ್ದ. ಸಾಮಾನ್ಯವಾಗಿ ಆತನನ್ನು ಧೌಮ್ಯ ಎಂದು ಕರೆಯುತ್ತಿದ್ದರು. ಆತ ಒಂದು ಗುರುಕುಲವನ್ನು ನಡೆಸುತ್ತಿದ್ದ. ಅಲ್ಲಿ ಅನೇಕ ವಿದ್ಯಾರ್ಥಿಗಳು ಅಧ್ಯಯನ ನಡೆಸುತ್ತಿದ್ದರು. ಅವರಲ್ಲಿ ಉಪಮನ್ಯು ಎಂಬ ಒಬ್ಬ ವಿಧ್ಯಾರ್ಥಿಯಿದ್ದ. ಹಳ್ಳಿಯ ಹೊರಭಾಗ ಪರ್ಣಶಾಲೆಯಲ್ಲಿ ಉಪಮನ್ಯುವೂ ಉಳಿದ ಶಿಷ್ಯರೂ ಗುರುವಿನ ಜತೆಯಲ್ಲೇ ವಾಸವಮಾಡಿಕೊಂಡಿದ್ದರು.

ಗುರುಕುಲದಲ್ಲಿ ಕಠಿನವಾದ ಅನೇಕ ನಿಯಮಗಳನ್ನು ಅನುಸರಿಸಬೇಕಾಗಿತ್ತು. ಅತ್ಯಂತ ಕಠಿನವಾದ್ದು ವಿಧೇಯತೆ. ಆಚಾರ್ಯನ ಆದೇಶವನ್ನು ಪ್ರಶ್ನೆಯಿಲ್ಲದೆ ಒಪ್ಪಿಕೊಂಡು ನಡೆಸಬೇಕಿತ್ತು. ಎರಡನೆಯ ಮುಖ್ಯ ನಿಯಮ ಆಹಾರಕ್ಕೆ ಸಂಬಂಧಿಸಿದ್ದು. ಹಳ್ಳಿಯ ಮನೆಗಳಿಂದ ನಿತ್ಯವೂ ಸಿದ್ಧ ಮಾಡಿದ ಆಹಾರ ಸಿಕ್ಕುತ್ತಿತ್ತು. ಶಿಷ್ಯರು ಅದನ್ನು ಸಂಗ್ರಹಿಸಿ ಪರ್ಣಶಾಲೆಗೆ ತರುತ್ತಿದ್ದರು. ತಂದ ಆಹಾರವನ್ನೆಲ್ಲ ಕೂಡಿಸಿ ಆಚಾರ್ಯ ಅದನ್ನು ಎಲ್ಲರಿಗೂ—ತನಗೂ ಕೂಡಿ—ಸಮಾನವಾಗಿ ಹಂಚುತ್ತಿದ್ದ.

ಗುರುಕುಲದಲ್ಲೇ ಹಣ್ಣುಗಳನ್ನು ಬೆಳೆದುಕೊಳ್ಳುತ್ತಿದ್ದರು. ಗೋಶಾಲೆಯನ್ನೂ ನಡೆಸು-ತ್ತಿದ್ದರು.



ಅಲ್ಲಿ ಧರ್ಮ ಮತ್ತು ಯುದ್ಧಕಲೆ ಈ ಎರಡು ವಿಷಯಗಳಲ್ಲಿ ಬಾಲಕರಿಗೆ ಶಿಕ್ಷಣ ದೊರಕುತ್ತಿತ್ತು. ಪುರೋಹಿತರಾಗಬೇಕೆನ್ನುವವರು, ವೇದೋಪನಿಷತ್ತುಗಳನ್ನೂ ವಿವಾಹ ಮರಣ ಮುಂತಾದ ಸಂಸ್ಕಾರಗಳನ್ನು ನಡೆಸುವುದನ್ನೂ ಯಜ್ಞಯಾಗಾದಿಗಳ ನಿರ್ವಹಣೆಯನ್ನೂ ಕಲಿತುಕೊಳ್ಳುತ್ತಿದ್ದರು; ಯೋಧರಾಗಬೇಕೆನ್ನುವವರು ಶಸ್ತ್ರಾಸ್ತ್ರಗಳ ಪ್ರಯೋಗವನ್ನೂ ಯುದ್ಧನೀತಿಗಳನ್ನೂ ಕಲಿತುಕೊಳ್ಳುತ್ತಿದ್ದರು.

ಗುರುಕುಲದ ಆಚಾರ್ಯನೆಂದರೆ ಕೇವಲ ಶಿಕ್ಷಕನಷ್ಟೇ ಆಗಿರದೆ ಆ ಶಿಷ್ಯರಿಗೆ ತಂದೆ ತಾಯಿಯೂ ಆಗಿರುತ್ತಿದ್ದ. ಶಿಷ್ಯರೆಲ್ಲ ಚಿಕ್ಕ ಬಾಲಕರಿದ್ದು ತಂದೆ ತಾಯಿಯರು ಅವರನ್ನು ಈತನ ವಶಕ್ಕೆ ಕೊಟ್ಟಿರುತ್ತಿದ್ದರಿಂದ, ಅವರ ಬಗ್ಗೆ ಈತ ಜವಾಬ್ದಾರಿಯಿಂದಿರುತ್ತಿದ್ದ. ಅವನು ಶಿಷ್ಯರ ಮನಸ್ಸು ಶರೀರಗಳೆರಡರ ಬಗ್ಗೆಯೂ ಗಮನವಿಡುತ್ತಿದ್ದ. ಅವರ ಆಚಾರಗಳನ್ನು ಕಣ್ಣಿಟ್ಟು ನೋಡುತ್ತ ಅವರ ಚಿಂತನೆಗಳಿಗೆ ಮಾರ್ಗದರ್ಶನ ಮಾಡುತ್ತಿದ್ದ, ಅವರ ವ್ಯಕ್ತಿತ್ವವನ್ನು ರೂಪಿಸುತ್ತಿದ್ದ. ನಿಯಮಗಳನ್ನು ವಿಧಿಸುತ್ತಿದ್ದ. ಆರೋಗ್ಯ ಕೆಟ್ಟರೆ ಬಾಲಕರನ್ನು ಎಚ್ಚರದಿಂದ ಆರೈಕೆ ಮಾಡುತ್ತಿದ್ದ, ತಪ್ಪು ಮಾಡಿದಾಗ ಶಿಕ್ಷೆ ವಿಧಿಸುತ್ತಿದ್ದ. ಯಾರೇ ಆಗಲಿ, ರಾಜನಾದರೂ ಸರಿಯೆ, ಬಾಲಕರನ್ನು ಗುರುಕುಲಕ್ಕೆ ಕಳಿಸಿದ ಮೇಲೆ, ಆಚಾರ್ಯನ ಮಾತಿಗೆ ಪ್ರಶ್ನೆಯೆತ್ತಲು ಸಾಧ್ಯವಿರಲಿಲ್ಲ.

ಒಂದು ದಿನ ಧೌಮ್ಯ ಉಪಮನ್ಯುವನ್ನು ಕರೆದು ಹೇಳಿದ: "ಉಪಮನ್ಯು, ಈಗ ರಾಜನು ಯಜ್ಞವನ್ನಾರಂಭಿಸಿದ್ದಾನೆ. ನೀನು ಕೆಲವು ದಿನ ರಾಜನ ಜತೆಯಲ್ಲಿದ್ದು ಎಲ್ಲ ರೀತಿಯಲ್ಲೂ ಆತನಿಗೆ ನೆರವಾಗಬೇಕು. ಪುರೋಹಿತರು ತಮ್ಮ ಕರ್ತವ್ಯವನ್ನು ಹೇಗೆ ನಿರ್ವಹಿಸುತ್ತಿದ್ದಾರೆ ಎಂಬ ಬಗ್ಗೆ ಕಣ್ಣಿಟ್ಟಿರಬೇಕು." ಉಪಮನ್ಯು ರಾಜನ ಸಮೀಪ ಸೇವಕನಾಗಿರಲು ಸಂತೋಷಚಿತ್ತನಾಗಿ ಹೊರಟ. ಆತ ಹರ್ಷಚಿತ್ತನೂ ಕಷ್ಟಪಟ್ಟು ಕೆಲಸ ಮಾಡುವವನೂ ಆಗಿದ್ದರಿಂದ ಎಲ್ಲರೂ ಅವನನ್ನು ಕಂಡು



ಸಂತುಷ್ಟರಾದರು. ಕೆಲವುದಿನಗಳ ಅನಂತರ ಉಪಮನ್ಯು ಗುರುಕುಲಕ್ಕೆ ಹಿಂತಿರುಗಿದ ಮೇಲೆ ಒಂದು ದಿನ ಧೌಮ್ಯ ಆತನನ್ನು ತನ್ನ ಹತ್ತಿರ ಕರೆಸಿದ.

"ಉಪಮನ್ಯು, ಈ ದಿನಗಳಲ್ಲಿ ನೀನು ಉಪವಾಸದಿಂದಿದ್ದೆಯಾ?"

"ಇಲ್ಲ, ಆಚಾರ್ಯ" ಎಂದು ಉತ್ತರಿಸಿದ ಉಪಮನ್ಯು. ಅವನಿಗೆ ಆಶ್ಚರ್ಯವಾಗಿತ್ತು.

ಧೌಮ್ಯ ಹೇಳಿದ: "ಇಲ್ಲ ಎಂದು ಊಹಿಸಿದೆ. ನೀನು ಪುಷ್ಟನಾಗಿ ಕಾಣುತ್ತೀಯೆ. ಅರಮನೆಯ ಭಕ್ಷ್ಯ ಭೋಜ್ಯಗಳನ್ನು ದುರಾಶೆಯಿಂದ ಹೊಟ್ಟೆಗೆ ತುಂಬಿಕೊಂಡಿಲ್ಲ ಎಂದು ನಂಬುತ್ತೇನೆ."

"ಇಲ್ಲ ಗುರುವೇ. ರೂಢಿಯ ಪ್ರಕಾರ ನಾನು ನಿತ್ಯವೂ ಹಳ್ಳಿಗೆ ಹೋಗಿ ಆಹಾರ ಸಂಗ್ರಹಿಸಿ ತರುತ್ತಿದ್ದೆ. ಹಳ್ಳಿ ಅರಮನೆಗೆ ದೂರವಿಲ್ಲ; ಕೆಲವೇ ಗಾವುದ ನಡೆದರಾಯಿತು."

"ಆದರೆ ಎಂದೂ ನೀನು ಇಲ್ಲಿ ಆಶ್ರಮಕ್ಕೆ ಆಹಾರವನ್ನು ತಂದ ಹಾಗೆ ಕಾಣಲಿಲ್ಲವಲ್ಲ" ಎಂದ ಧೌಮ್ಯ

ಉಪಮನ್ಯುವಿಗೆ ತತ್ಕ್ಷಣ ನೆನಪಾಯಿತು, ತಾನು ಸಂಗ್ರಹಿಸಿದ ಆಹಾರವನ್ನೆಲ್ಲ ಇಲ್ಲಿಗೆ ತಂದು ಗುರುವಿಗೆ ಒಪ್ಪಿಸಬೇಕಾಗಿತ್ತು ಎಂಬುದು. ಕೈಯೆತ್ತಿ ಹಣೆ ಬಡಿದುಕೊಂಡ. ತಾನು ನಿಯಮವನ್ನು ಮರೆತುಬಿಟ್ಟೆ ಎಂದು ತಪ್ಪೊಪ್ಪಿಕೊಂಡ. ಗುರುವಿನ ಕ್ಷಮೆ ಬೇಡಿಕೊಂಡ.

ಆದಿನ ಉಪಮನ್ಯು ತನಗೆ ದೊರೆತ ಆಹಾರವನ್ನೆಲ್ಲ ತಂದು ಗುರುವಿಗೇ ಒಪ್ಪಿಸಿದ. ಉಪಮನ್ಯುವಿನ ಆತ್ಮ ಸಂಯಮವನ್ನು ಪರೀಕ್ಷಿಸಬೇಕೆಂದು ಧೌಮ್ಯ, ಆತ ಆಹಾರವನ್ನೆಲ್ಲ



ಒಪ್ಪಿಸಿದ ಕೂಡಲೇ ಆತನನ್ನು ಆಯಿತು ಎಂದು ಕಳಿಸಿಬಿಟ್ಟ. ಉಪಮನ್ಯು ದಿನವಿಡೀ ಕಾದರೂ ಯಾರೂ ಆಹಾರಕೊಡಲಿಲ್ಲ. ಹಸಿವಿನಿಂದ ಬಳಲುತ್ತ ನಿದ್ದೆ ಹೋದ.

ಎರಡು ದಿನಗಳಾದ ಮೇಲೆ ಧೌಮ್ಯ ಪುನಃ ತನ್ನ ಶಿಷ್ಯನಿಗೆ ಹೇಳಿಕಳಿಸಿದ. ಉಪಮನ್ಯು ಸೊರಗಿ ಹೋಗಿರುತ್ತಾನೆ, ಕಣ್ಣುಗುಳಿ ಬಿದ್ದಿರುತ್ತವೆ ಎಂದು ಅವನ ಎಣಿಕೆಯಾಗಿತ್ತು. ಆದರೆ ಉಪಮನ್ಯು ಉತ್ಸಾಹದಿಂದ ಉಕ್ಕುತ್ತ ಬಂದ, ಯಾವಾಗಿನಂತೆ ಹರ್ಷಚಿತ್ತನಾಗಿ. ಧೌಮ್ಯನಿಗೆ ಆಶ್ಚರ್ಯವಾಯಿತು.

ಧೌಮ್ಯ ಬೆರಗಾಗಿ ಕೇಳಿದ: "ಉಪಮನ್ಯು, ಈ ಎರಡು ದಿನಗಳಿಂದ ನೀನು ಸಂಗ್ರಹಿಸಿ ತಂದ ಆಹಾರವನ್ನೆಲ್ಲ ನಾನೇ ತೆಗೆದುಕೊಂಡಿದ್ದೇನೆ. ನಿನಗೆ ಏನೂ ಕೊಟ್ಟಿಲ್ಲ. ನೀನು ಹಸಿವಿನಿಂದ ಬಳಲುತ್ತಿರುತ್ತೀಯೆ ಎಂದು ಊಹಿಸಿದ್ದೆ. ಆದರೆ ನೀನು ಲವಲವಿಕೆಯಿಂದ ಕುಣಿಯುತ್ತಿದ್ದೀಯೆ. ಇದಕ್ಕೆ ಏನು ಕಾರಣ?"

ಬಾಲಕ ಹೇಳಿದ: "ಗುರುವೇ ನಾನು ಎರಡನೇ ಸಲ ಹಳ್ಳಿಗೆ ಹೋಗಿ ಆಹಾರ ಪಡೆದು ತಿನ್ನುತ್ತಿದ್ದೇನೆ."

ಧೌಮ್ಯನ ಮುಖ ಅಸಂತೋಷದಿಂದ ಬಾಡಿತು. "ಹಳ್ಳಿಯಿಂದ ದಿನಕ್ಕೆ ಒಂದು ಸಲ ಮಾತ್ರವೇ ಆಹಾರ ಸಂಗ್ರಹಿಸತಕ್ಕದ್ದೆಂದು ನಾನು ಮೇಲಿಂದ ಮೇಲೆ ಹೇಳಿಲ್ಲವೆ?" ಉತ್ತರ ಕೊಡು ಎಂದ ಧೌಮ್ಯ, ಕಠಿನವಾಗಿ.

"ಹೌದು" ಎಂದ ಉಪಮನ್ಯು ಸೊರಗಿದ ದನಿಯಲ್ಲಿ. "ನನಗೆ ಹಸಿವಾಗುತ್ತಿತ್ತು. ಹಸಿವಿನಲ್ಲಿ ನಿಯಮವನ್ನು ಮರೆತೆ".

"ಆ ಹಳ್ಳಿ ಈ ಆಶ್ರಮವೊಂದಕ್ಕೇ ಆಹಾರ ಕೊಟ್ಟು ಪೋಷಿಸುತ್ತಿಲ್ಲ" ಎಂದು ಧೌಮ್ಯ ಮುಂದುವರಿಸಿದ. "ಆ ಜನಕ್ಕೆ ಕೃತಜ್ಞನಾಗಿರುವ ಬದಲು ನೀನು ಅತ್ಯಾಸೆ ಮಾಡಿದ್ದೀಯೆ. ನೀನು ತಪ್ಪು ಮಾಡಿದ್ದೀಯೆ. ಈಗ ಹೋಗು, ಇನ್ನು ಮುಂದೆ ನೀನು ಹಸುಗಳನ್ನು ನೋಡುತ್ತ ನಾನು ಹೇಳಿದ ವಿಷಯದ ಬಗ್ಗೆ ಯೋಚನೆ ಮಾಡಿಕೊಳ್ಳುತ್ತಿರು."

ಉಪಮನ್ಯುವಿನ ಶಿಕ್ಷೆ ಮುಂದುವರಿಯಿತು. ಆತ ಹಳ್ಳಿಯಿಂದ ಆಹಾರ ಸಂಗ್ರಹಿಸಿ ತಂದು ಧೌಮ್ಯನಿಗೆ ಒಪ್ಪಿಸುತ್ತಿದ್ದ. ಮುಗಿಯಿತು, ಆಮೇಲೆ ಆತನಿಗೆ ಆಹಾರ ಕಣ್ಣಿಗೆ ಬೀಳುತ್ತಿರಲಿಲ್ಲ. ಮೂರು ದಿನ ಕಳೆದವು. ತನ್ನ ಶಿಷ್ಯ ಬಂದು ಆಹಾರ ಬೇಡುತ್ತಾನೆ ಎಂದು ಧೌಮ್ಯ ನಿರೀಕ್ಷಿಸು



ತ್ತಲೇ ಇದ್ದ. ಉಪಮನ್ಯು ಆಹಾರಕ್ಕಾಗಿ ಬರಲೇ ಇಲ್ಲ. ಅಷ್ಟೇ ಅಲ್ಲ, ಆತ ಎಂದಿನ ಅದೇ ಉಲ್ಲಾಸದಿಂದ ಕೆಲಸ ಮಾಡುತ್ತಿದ್ದ. ಪುನಃ ಗುರು ಆತನಿಗೆ ಕರೆಕಳಿಸಿದ.

"ಈ ದಿನ ಹಸುಗಳನ್ನು ಕಾಡಿಗೆ ಹೊಡೆದುಕೊಂಡು ಹೋಗಲು ಕಷ್ಟವಾಯಿತೆ? ಧೌಮ್ಯ ಬಾಲಕನನ್ನು ಪ್ರಶ್ನಿಸಿದ.

"ಇಲ್ಲ ಗುರುಗಳೆ" ಎಂದ ಉಪಮನ್ಯು ಹರ್ಷಚಿತ್ತನಾಗಿ.

ಗುರು ಮತ್ತೆ ಹೇಳಿದ: "ನೀನು ಇಡೀ ಮೂರು ದಿನಗಳಿಂದ ಆಹಾರವಿಲ್ಲದೆ ಇದ್ದೆಯಲ್ಲ, ಅದಕ್ಕಾಗಿ ಕೇಳಿದೆ. ಹಸಿವಿನಿಂದ ನಿನ್ನ ಕಾಲು ಸೋಲಿಲ್ಲವೆ? ತಲೆಸುತ್ತಲಿಲ್ಲವೆ?"

"ನಾನು ಹಸಿದಿರಲಿಲ್ಲ" ಎಂದ ಉಪಮನ್ಯು.

ಗುರು ಆಶ್ಚರ್ಯಪಟ್ಟ. "ಏನು? ಈಗಾಗಲೇ ನೀನು ಹಸಿವನ್ನು ಗೆದ್ದುಬಿಟ್ಟಿದ್ದೀಯೇನು?"

ಉಪಮನ್ಯು ದಿಙ್ಮೂಢನಾದ. ತಾನು ಪುನಃ ಪ್ರಮಾದ ಮಾಡಿದ್ದೇನೆಂದು ತಿಳಿಯಿತು. ಆತ ಮೆಲ್ಲಗೆ ಹೇಳಿದ: "ಗುರುವೇ, ಹಸುಗಳನ್ನು ನೋಡಿಕೊಳ್ಳುತ್ತ ನಾನು ಅವುಗಳ ಹಾಲನ್ನೇ ಸೇವಿಸುತ್ತಿದ್ದೆ."

ದೀರ್ಘಕಾಲ ಮೌನ ಹಬ್ಬಿಕೊಂಡಿತು. ಬಾಲಕನಿಗೆ ಏನು ಮಾಡಲೂ ತಿಳಿಯದೆ ಮುಜುಗರ ವಾಯಿತು. ಗುರು ದುಃಖಿತನಾದ, ಕೋಪಗೊಂಡ. ಕೊನೆಯಲ್ಲಿ ಧೌಮ್ಯ ಶಾಂತನಾಗಿ ಹೇಳಿದ: "ಉಪಮನ್ಯು, ನೀನು ಯಾವತ್ತೂ ಸುಳ್ಳು ಹೇಳುವುದಿಲ್ಲವೆಂಬುದನ್ನು ಗಮನಿಸಿದ್ದೇನೆ. ಅಭ್ಯಾಸದಲ್ಲಿ ನೀನು ಕ್ರಮ ತಪ್ಪಿದ್ದಿಲ್ಲ, ಚೆನ್ನಾಗಿ ಅಭ್ಯಾಸ ಮಾಡುತ್ತೀಯೆ. ಹರ್ಷಚಿತ್ತನಾಗಿರುತ್ತೀಯೆ ಮತ್ತು ಉಳಿದವರನ್ನು ಹರ್ಷದಿಂದಿಡುತ್ತೀಯೆ. ಆದರೆ ನಿನ್ನಲ್ಲಿ ಒಂದು ಊನವಿದೆ. ಈಗ ಎಳೆಯನಾಗಿರುವಾಗ ಅದನ್ನು ಕಡೆಗಣಿಸಿದರೆ ಮುಂದೆ ನಿನ್ನ ಇಡೀ ಜೀವನವನ್ನೇ ವ್ಯಾಪಿಸಿ

ಹಾಳು ಮಾಡಬಹುದು. ನೀನು ಹೊಟ್ಟೆಯ ಅಂಕೆಯಲ್ಲಿದ್ದೀಯೆ? ಛೆ, ಅದರ ವಿಷಯದಲ್ಲಿ ಎಲ್ಲ ನಿಯಮಗಳನ್ನು ಮರೆತು ಬಿಡುತ್ತೀಯೆ. ಹಸಿವಾದಾಗ ನಿನ್ನ ಕ್ರಿಯೆಗಳ ಮೇಲೆ ನಿನಗೆ ಹತೋಟಿಯೇ ಇರುವುದಿಲ್ಲ. ತನ್ನ ದೇಹ ತನ್ನ ಮನಸ್ಸಿನ ಹತೋಟಿಯಲ್ಲಿಲ್ಲದಿದ್ದರೆ ಅಂಥ ಮನುಷ್ಯ ಎಂಥದಕ್ಕೆ ಬೇಕಾದರೂ ಇಳಿದು ಬಿಡುತ್ತಾನೆ ಎಂಬುದನ್ನು ನಾನು ನಿನಗೆ ಅನೇಕ ಸಲ ಹೇಳಿದ್ದೇನೆ. ಅಂಥವನು ತನಗೆ ಒಂದು ಜಾತ್ರೆ ನೋಡಬೇಕು ಎನ್ನಿಸಿದರೆ ಅದಕ್ಕಾಗಿ ಸುಳ್ಳು ಹೇಳುತ್ತಾನೆ; ಹಸಿವಾಯಿತೆಂದರೆ ಆತ ಕಳವು ಮಾಡುತ್ತಾನೆ; ಒಳ್ಳೆಯ ಬಟ್ಟೆ ತೊಡಬೇಕೆಂದು ಮೋಸ ಮಾಡುತ್ತಾನೆ. ಇಂತಹ ವಿದ್ಯೆಯನ್ನು ಕಲಿಯಲಿಕ್ಕೆಂದು ನಿನ್ನ ತಂದೆ ನಿನ್ನನ್ನು ನನ್ನ ಬಳಿ ತಂದು ಒಪ್ಪಿಸಿದರೆ, ಉಪಮನ್ಯು?"

ತನ್ನ ಗುರುವಿನ ಈ ದುಃಖಪೂರಿತವಾದ ಮೃದು ವಾಕ್ಯಗಳಿಂದ ಉಪಮನ್ಯುವಿಗೆ ತುಂಬ ನಾಚಿಕೆಯಾಯಿತು; ಬೈದಿದ್ದರೆ ಅಥವಾ ಹೊಡೆದಿದ್ದರೆ ಆಗುವುದಕ್ಕಿಂತ ಹೆಚ್ಚಾಗಿ ನಾಚಿಕೆಯಾಯಿತು. ಇನ್ನು ಎಂದಿಗೂ ತನ್ನಲ್ಲಿ ಧೌಮ್ಯನಿಗೆ ತಪ್ಪು ಕಾಣಲು ಅವಕಾಶ ಕೊಡುವುದಿಲ್ಲ ಎಂದು ನಿರ್ಧರಿಸಿಕೊಂಡನು.

"ಗುರುವೇ" ಎಂದ, ಮುಖಕೆಂಪಾಗಿ, ಕಣ್ಣಿಗೆ ಕಣ್ಣಿಟ್ಟು ಗುರುವನ್ನು ನೋಡಲು ಸಾಧ್ಯವಾಗದೆ. "ಇನ್ನು ನೀವೇ ತಿನ್ನು ಎಂದು ಹೇಳುವ ತನಕ ಮತ್ತೊಂದು ತುತ್ತನ್ನು ಬಾಯಿಗಿಡುವುದಿಲ್ಲ".

ಆದಿನ ಮತ್ತು ಮಾರನೆಯ ದಿನ ಕೂಡ ಉಪಮನ್ಯು ಏನನ್ನೂ ಮುಟ್ಟಲಿಲ್ಲ. ಮಾರನೇಯ ದಿನ, ಆತ ಹಸುಗಳನ್ನು ಮೇಯಿಸುತ್ತಿದ್ದಾಗ, ಹಸಿವು ವಿಪರೀತವಾಗಿ ತಡೆಯಲಾಗದೆ ಹತಾಶನಾಗಿ, ಅಲ್ಲಿದ್ದ ಒಂದು ಗಿಡದ ರಸ ತುಂಬಿದ ದಪ್ಪ ಎಲೆಗಳನ್ನೇ ಬಾಚಿ ಕಬಳಿಸಿದ. ಆದರೆ ದುರದೃಷ್ಟವಶಾತ್, ಅದು ಒಂದು ಔಷಧದ ಗಿಡವಾಗಿತ್ತು. ಕಟುವಾಸನೆಯುಳ್ಳ ಆ ಎಲೆಗಳನ್ನು ತಿಂದೊಡನೆ ಉಪಮನ್ಯುವಿನ ಕಣ್ಣುಗಳಲ್ಲಿ ನೋವು ಕಾಣಿಸಿತು, ಸ್ವಲ್ಪ ಹೊತ್ತಿನಲ್ಲಿ ಆ ಪಾಪದ ಹುಡುಗನಿಗೆ ಏನೇನೂ ಕಾಣದಾಯಿತು. ಆತ ಕುರುಡನಾಗುತ್ತಿದ್ದ. ಭಯದಿಂದ ಬುದ್ಧಿ ಮಂಕಾಗಿ, ಹೇಗಾದರೂ ಕತ್ತಲೆಯಾಗುವುದರೊಳಗೆ ಆಶ್ರಮವನ್ನು ಸೇರಬೇಕೆಂದು ಕಾತರಿಸುತ್ತ ಏಳುತ್ತ ಬೀಳುತ್ತ ನಡೆದ. ಆದರೆ ಹಾದಿಕಾಣದೆ ದಾರಿ ತಪ್ಪಿ ಹೋಯಿತು. ಮುಂದಕ್ಕೆ ಒಂದು ಗುಂಡಿಯಲ್ಲಿ ಬಿದ್ದು ಬಿಟ್ಟ. ಅಲ್ಲೇ ಭಯ ಪೀಡಿತನಾಗಿ ಏಕಾಂಗಿಯಾಗಿ ಅಳುತ್ತ ಬಿದ್ದಿದ್ದ. ಕಾಡಿನ ಮೇಲೆ ಶೀಘ್ರವಾಗಿ ರಾತ್ರಿ ಹಬ್ಬಿಕೊಂಡಿತು.

ಕತ್ತಲಾಗುವ ಹೊತ್ತಿಗೆ ಧೌಮ್ಯ ಉಪಮನ್ಯುವಿಲ್ಲದ್ದನ್ನು ಕಂಡ. ಅವನ ಬಗ್ಗೆ ಉಳಿದವರನ್ನು ಕೇಳಿದ.



ಅವರಲ್ಲೊಬ್ಬ ಶಿಷ್ಯ ಹೇಳಿದ: "ಆತ ಎಂದಿನಂತೆ ಹಸುಗಳನ್ನು ಮೇಯಿಸಲು ಕಾಡಿಗೆ ಹೋಗಿದ್ದ. ಹಸುಗಳೆಲ್ಲ ಮನೆಗೆ ಹಿಂತಿರುಗಿದ್ದಾವೆ. ಆದರೆ ಅವನು ಮಾತ್ರ ಇನ್ನೂ ಬಂದಿಲ್ಲ."

"ಕತ್ತಲಾಗುತ್ತಿದೆಯಲ್ಲ" ಎಂದ ಗುರು, ಆತುರವಾಗಿ ಮೇಲಕ್ಕೇಳುತ್ತ. "ನಡೆಯಿರಿ ನಾವು ಹೋಗಿ ನೋಡೋಣ."

ಗುರು ಮತ್ತು ಶಿಷ್ಯರು ಕೂಡಿ ಉಪಮನ್ಯುವನ್ನು ಹುಡುಕುವುದಕ್ಕೆ ಹೊರಟರು. ರೂಢಿಯಾಗಿದ್ದ ಜಾಗಗಳಲ್ಲೆಲ್ಲ ಅವರು ಹುಡುಕಿ ನೋಡಿದರೂ ಆತ ಸಿಕ್ಕಲಿಲ್ಲ. ಕೊನೆಯಲ್ಲಿ ಗುರು ಅವರೆಲ್ಲರನ್ನೂ ಕರೆದುಕೊಂಡು ಒಂದು ಹೊಸ ಹಾದಿಯಲ್ಲಿ ಹೊರಟ. ದೊಡ್ಡದಾಗಿ ಕೂಗಿದ." ಓ, ಉಪಮನ್ಯು, ಎಲ್ಲಿದ್ದೀಯೆ? ಕರೆಯುವುದು ಕೇಳುತ್ತದೆಯೆ?"

ಮಿತಿ ಮೀರಿದ ಆಯಾಸದಿಂದಲೇ ಉಪಮನ್ಯುವಿಗೆ ಕೊಂಚ ಜಂಪು ಹತ್ತಿದಂತಾಗಿತ್ತು. ತನ್ನ ಗುರುವಿನ ದನಿ ಕೇಳಿದ ಕೂಡಲೇ ಆತ ಬೆಚ್ಚಿ ಎಚ್ಚರಾದ. "ಗುರುವೇ, ನಾನು ಇಲ್ಲಿದ್ದೇನೆ" ಆತ ಕೂಗಿದ. "ನಾನು ಈ ಗುಂಡಿಯಲ್ಲಿ ಬಿದ್ದಿದ್ದೇನೆ."

ಅಂತೂ ಕೊನೆಗೆ ಈ ಆಶ್ರಮದ ತಂಡ ಅವನನ್ನು ಕಂಡಿತು. ಉಪಮನ್ಯುವಿನ ವಸ್ತ್ರಗಳು ಹರಿದಿದ್ದವು, ದೇಹದ ತುಂಬ ಮುಳ್ಳು ತರಿದಿತ್ತು, ಕೆನ್ನೆಯ ಮೇಲೆ ಇನ್ನೂ ಕಣ್ಣೀರು ಥಳಗುಮುತ್ತಿತ್ತು.



"ಈ ಗುಂಡಿಯಲ್ಲೇಕೆ ಕೂತಿದ್ದೀಯೆ ಉಪಮನ್ಯು?" ಎಂದು ಗುರು ಕೇಳಿದ, ತನ್ನ ಶಿಷ್ಯನ ಕಡೆ ಕೆಳಗೆ ನೋಡುತ್ತ.

ತನ್ನ ದುಃಖಸಂಕಟಗಳನ್ನು ಹತ್ತಿಕ್ಕಿಕೊಳ್ಳಲು ಪೇಚಾಡುತ್ತ ಉಪಮನ್ಯು ಹೇಳಿದ: "ಗುರುವೆ, ನಾನು ಈ ಗುಂಡಿಯಲ್ಲಿ ಬಂದು ಕೂತದ್ದಲ್ಲ. ಅದರೊಳಕ್ಕೆ ಬಿದ್ದುಬಿಟ್ಟಿದ್ದೇನೆ. ಒಂದು ಗಿಡದ ಎಲೆಗಳನ್ನು ತಿಂದುಬಿಟ್ಟೆ. ಅದರಿಂದ ಕಣ್ಣಲ್ಲಿ ನೀರು ತುಂಬಿ ಮಂಜಾಗಿ ಹೋಯಿತು. ನಾನೀಗ ಕುರುಡನಾಗಿಬಿಟ್ಟಿದ್ದೇನೆ ಎಂದು ತೋರುತ್ತದೆ." ಕೊಂಚ ತಡೆದು ಕೇಳಿದ: "ಹಸುಗಳೆಲ್ಲ ಸುರಕ್ಷಿತವಾಗಿವೆಯೆ?"

ಹಸುಗಳೆಲ್ಲ ಸುರಕ್ಷಿತವಾಗಿ ಹಿಂದಿರುಗಿದ್ದಾವೆಂದು ಉಪಮನ್ಯುವಿನ ಸ್ನೇಹಿತರು ಭರವಸೆ ಹೇಳಿದರು. ಯಾವ ಗಿಡದ ಎಲೆಗಳನ್ನು ತಿಂದದ್ದು ಎಂಬುದನ್ನು ಗುರುತು ಹೇಳು ಎಂದು ಧೌಮ್ಯ ಕೇಳಿಕೊಂಡ. ಆಮೇಲೆ ಹೇಳಿದ: "ನೀನು ಇಲ್ಲೇ ಇದ್ದು ಕಣ್ಣುಗಳು ಸರಿಯಾಗುವುದಕ್ಕಾಗಿ ದೇವರನ್ನು ಪ್ರಾರ್ಥಿಸಬೇಕೆಂದು ನಾನು ಸೂಚಿಸುತ್ತೇನೆ. ನಿನ್ನ ಪ್ರಾರ್ಥನೆ ಪ್ರಾಮಾಣಿಕವಾಗಿದ್ದರೆ ದೇವರು ಸಹಾಯ ಮಾಡುತ್ತಾನೆ. ನಿನ್ನ ಕಣ್ಣು ಮೊದಲಿನಂತೆ ಸರಿಯಾದ ಬಳಿಕ ಅಥವಾ ಈ ಕುರುಡುಗಣ್ಣುಗಳನ್ನಿಟ್ಟುಕೊಂಡೇ ಬದುಕುತ್ತೇನೆಂಬ ಧೈರ್ಯ ಮಾಡಿದ ಬಳಿಕ ಆಶ್ರಮಕ್ಕೆ ಹಿಂದಿರುಗಿ ಬಾ."

ತಾನೀಗ ಪರೀಕ್ಷೆಗೆ ಗುರಿಯಾಗಿದ್ದೇನೆಂದು ಉಪಮನ್ಯುವಿಗೆ ತತ್ಕ್ಷಣವೇ ಅರಿವಾಯಿತು. ಅತ್ತು ಕರುಣೆ ಬೇಡುವುದಕ್ಕೆ ಆತನ ಆತ್ಮಗೌರವ ಒಪ್ಪಲಿಲ್ಲ. ತಲೆಬಾಗಿ ಗುರುವಿನ ಆದೇಶವನ್ನು



ಒಪ್ಪಿಕೊಂಡ. ಎದೆಯ ಮೇಲೆ ಕೈಗಳನ್ನಿಟ್ಟುಕೊಂಡು ಧ್ಯಾನಕ್ಕೆ ಸಿದ್ಧನಾದ. ಧೌಮ್ಯ ಶಿಷ್ಯರುಗಳನ್ನು ಕರೆದುಕೊಂಡು ಆಶ್ರಮಕ್ಕೆ ಮರಳಿದ.

ಕಾಡಿನ ತುಂಬ ಕತ್ತಲೆ ಹಬ್ಬಿ ವಿಚಿತ್ರ ಸದ್ದುಗಳು ಕೇಳುತ್ತಿದ್ದವು. ಆದರೆ ಉಪಮನ್ಯುವಿಗೆ ಈಗ ಭಯವೇ ಇರಲಿಲ್ಲ. ತನಗೆ ಬಂದ ಶಿಕ್ಷೆಯನ್ನು ಗಂಡಸಿನ ಹಾಗೆ ಅನುಭವಿಸುತ್ತೇನೆ ಎಂಬುದನ್ನು ಸಿದ್ಧಮಾಡಿ ತೋರಿಸಲು ನಿಶ್ಚಯ ಮಾಡಿಕೊಂಡಿದ್ದ. ಮೊದಲು ಆತ ದೊಡ್ಡದಾಗಿ ಪ್ರಾರ್ಥಿಸಿದ: "ಸ್ವರ್ಗವಾಸಿಗಳಾದ ಎಲ್ಲೈ ದೇವತೆಗಳೇ ನನಗೆ ನೆರವಾಗಿ, ನನ್ನ ಕಣ್ಣುಗಳು ಸರಿಯಾಗಲಿ. ನೀವು ಕರುಣಾಳುಗಳು, ನ್ಯಾಯ ಪ್ರವರ್ತಕರು, ಶಾಂತರು, ನನ್ನ ಮೌಢ್ಯವನ್ನು ಮನ್ನಿಸಿ. ಈ ದಿನ ನಾನು ಮತ್ತೆಂದೂ ಮರೆಯದಂಥ ಪಾಠ ಕಲಿತಿದ್ದೇನೆ."

ಬಹುಬೇಗ ಉಪಮನ್ಯು ಧ್ಯಾನದಲ್ಲಿ ಸಂಪೂರ್ಣ ತಲ್ಲೀನನಾಗಿ ಹೋದ. ಎಷ್ಟೋ ಹೊತ್ತು ಕಳೆದ ಮೇಲೆ ನಕ್ಷತ್ರರೂಪರಾದ ಅಶ್ವಿನೀಕುಮಾರರಿಬ್ಬರು ಸಮಸ್ತ ವೈಭವದಿಂದ ತನ್ನೆದುರು ಮಿನುಗುತ್ತಿದ್ದಂತೆ ಭಾಸವಾಯಿತು. ಅವರು ದೇವ ವೈದ್ಯರೆಂದು ಗುರುಗಳು ಆತನಿಗೆ ತಿಳಿಸಿದ್ದರು.

"ನಮ್ಮನ್ನು ಕರೆದೆಯಾ ಉಪಮನ್ಯು?" ಅವರು ಪ್ರಶ್ನಿಸಿದರು. "ನಿನಗೆ ಏನು ಬೇಕು· ಹೇಳು?"

ತನಗೆ ಕಣ್ಣುಗಳನ್ನು ಕೊಡುವಂತೆ ಉಪಮನ್ಯು ಬೇಡಿಕೊಂಡ. ಅಶ್ವಿನೀ ಕುಮಾರರು ನಕ್ಕು ಆತನಿಗೆ ಔಷಧ ಪೂರಿತವಾದ ಹೋಳಿಗೆಯನ್ನು ತಿನ್ನಲು ಕೊಟ್ಟರು. ಉಪಮನ್ಯು ಅದನ್ನು ತೆಗೆದುಕೊಂಡು ಇನ್ನೇನು ಬಾಯಿಗಿಡಬೇಕು ಎನ್ನುವಷ್ಟರಲ್ಲಿ ತತ್ಕ್ಷಣ ಗುರುವೇ ಸ್ವತಃ ತಿನ್ನು ಎನ್ನದೆ ತಾನು ಏನನ್ನೂ ತಿನ್ನುವುದಿಲ್ಲ ಎಂದು ಶಪಥ ಮಾಡಿದ್ದು ನೆನಪಾಯಿತು. ಕೈಗಳು ಹಾಗೆಯೇ ಹೋಳಿಗೆಯ ಮೇಲೆ ಮುಚ್ಚಿಕೊಂಡವು.

"ನೀವು ದಯಪಾಲಿಸಿದ್ದನ್ನು ತೆಗೆದುಕೊಂಡಿದ್ದೇನೆ. ಇಗೋ ನನ್ನ ಹೃತ್ಪೂರ್ವಕ ವಂದನೆಗಳು." ಎಂದ ಉಪಮನ್ಯು.

"ಯಾಕೆ ಅದನ್ನು ತಿನ್ನುವುದಿಲ್ಲ?" ಎಂದು ಅವರು ಪ್ರಶ್ನಿಸಿದರು.

"ನನ್ನ ಗುರುಗಳ ಅಪ್ಪಣೆಯಿಲ್ಲದೆ ತಿನ್ನುವುದಿಲ್ಲವೆಂದು ನಾನು ಅವರಿಗೆ ವಚನ ಕೊಟ್ಟಿದ್ದೇನೆ" ಎಂದ ಬಾಲಕ.

"ಆದರೆ ನಿನ್ನ ಅನಾರೋಗ್ಯದಲ್ಲಿ ಈ ವಚನವನ್ನು ಕಡೆಗಣಿಸಬಹುದಲ್ಲ" ಎಂದರು ಅಶ್ವಿನೀ ದ್ವಯರು, ಕುತೂಹಲದಿಂದ ಅವನನ್ನೇ ನೋಡುತ್ತ.

"ಗುರುಗಳ ಅಪ್ಪಣೆಯಾಗದೆ ಬೇರೆ ಮಾತಿಲ್ಲ" ಎಂದು ಹೇಳಿದ ಉಪಮನ್ಯು ದೃಢವಾಗಿ.



ಅವನ ಮಾತುಕೇಳಿ ಅಶ್ವಿನೀ ದೇವತೆಗಳು ಒಬ್ಬರನ್ನೊಬ್ಬರು ನೋಡಿಕೊಂಡರು. ಆಮೇಲೆ ಉಪಮನ್ಯುವನ್ನು ನೋಡಿ ಮುಗುಳ್ನಕ್ಕು ಕೈಯೆತ್ತಿ ಆಶೀರ್ವದಿಸಿದರು. ಅನಂತರ ಆಕಾಶಕ್ಕೆ ಏರಿ ಪುನಃ ನಕ್ಷತ್ರಗಳಾಗಿ ಬಿಟ್ಟರು.

ಉಪಮನ್ಯು ಕಣ್ಣುತೆರೆದಾಗ ಅರುಣೋದಯದ ಪಕ್ಷಿಗಳು ಮರಗಳಲ್ಲಿ ಚಿಲಿಪಿಲಿಗುಡು ತ್ತಿದ್ದವು. ಆಶ್ಚರ್ಯ, ಆತನ ಕುರುಡು ಮಾಯವಾಗಿಬಿಟ್ಟಿತ್ತು ! ಪುನಃ ಕಣ್ಣು ಬಂದು ನೋಡು ವುದೇದರೆ ಎಂಥ ಅದ್ಭುತವೆನ್ನಿಸಿತ್ತು ! ಉಪಮನ್ಯು ಸ್ವಲ್ಪ ಹೊತ್ತು ಹಾಗೇ ಮಲಗಿ ಸುತ್ತ ನೋಡುತ್ತಲೇ ಇದ್ದ. ಹಿಂದೆ ಗ್ರಹಿಸಿಯೇ ಇರಲಿಲ್ಲ. ನೀಲ ಆಕಾಶದ ಎದುರು ಉಣ್ಣೆಯಂಥ ಶುಭ್ರ ಮೋಡಗಳು ಎಷ್ಟು ಚೆಲುವಾಗಿ ಕಾಣುತ್ತವೆ. ಹಿಂದೆ, ಹೂವುಗಳನ್ನು ನೋಡುವುದಕ್ಕೆ ನಿಂತದ್ದೇ ಇಲ್ಲ; ಈಗ, ಎತ್ತರದ ಮರಗಳ ಎಲೆಗಳ ಸಂದಿನಿಂದ ಸೂರ್ಯ ಕಿರಣಗಳು ನೆಲವನ್ನು ಮುಟ್ಟಿ ಥಳಗುಡುತ್ತ ಕಂಪಿಸುವಾಗ, ಚಿಕ್ಕ ಚಿಕ್ಕ ಮೊಗ್ಗುಗಳು ಅರಳತೊಡಗಿದ್ದುದನ್ನು ನೋಡಿದ. ಒಂದೇ ಗಿಡದಲ್ಲಿ ಹಸಿರು ಬಣ್ಣದ ಎಷ್ಟು ನೇಸಲುಗಳಿವೆ ಎಂಬುದನ್ನು ಆತ ಹಿಂದೆ ಎಂದಾ ದರೂ ಕಂಡದ್ದುಂಟೆ? ತಾನು ಹಿಂದೆಂದೂ ಕಾಣದೇ ಹೋಗಿದ್ದ ಪ್ರಕೃತಿಯ ಅದ್ಭುತಗಳನ್ನು ಹೀಗೆಯೇ ನೋಡುತ್ತ, ಹರ್ಷಪುಲಕಿತನಾಗಿ, ತಾಸು ತಾಸು ಬಿದ್ದುಕೊಳ್ಳಬೇಕು ಎನ್ನಿಸಿತು ಉಪಮನ್ಯುವಿಗೆ.

ಆದರೆ, ಆಶ್ರಮಕ್ಕೆ ಹಿಂತಿರುಗುವ ಸಮಯವಾಗಿತ್ತು. ಎದ್ದು ಕೂತ. ಕೈಯಲ್ಲಿ ಏನೋ ಮುಚ್ಚಿಟ್ಟುಕೊಂಡದ್ದು ತಿಳಿಯಿತು. "ಅಶ್ವಿನೀ ದೇವತೆಗಳು ಕೊಟ್ಟ ಹೋಳಿಗೆ ಇರಬೇಕು" ಎಂದು ಯೋಚಿಸಿದ ಉಪಮನ್ಯು.

ಜಾಗರೂಕನಾಗಿ, ಹೋಳಿಗೆಯೆಲ್ಲಿ ಕೈಯಿಂದ ಜಾರಿ ಹೋದೀತೋ ಎಂದು ಮುಷ್ಟಿ ಬಿಚ್ಚದೆ, ಗುಂಡಿಯಿಂದ ಮೆಲ್ಲಗೆ ಮೇಲಕ್ಕೇರಿದ, ಅಲ್ಲಿಂದ ಆಶ್ರಮಕ್ಕೆ ಓಡತೊಡಗಿದ. ಅವನಿಗೆ ಬಲಬಂದಂತೆನ್ನಿಸಿತ್ತು. ಹರ್ಷ ಉಕ್ಕುತ್ತಿತ್ತು; ಕೊಂಚವೂ ಆಯಾಸವಿರಲಿಲ್ಲ, ಭಯವಿರಲಿಲ್ಲ, ಹಸಿವೆಯಿರಲಿಲ್ಲ. ಆಶ್ರಮ ತಲುಪಿದೊಡನೆಯೇ ನೇರಗುರುವಿನ ಬಳಿಗೆ ಧಾವಿಸಿದ.



ನಾನು ಮರಳಿಬಂದಿದ್ದೇನೆ." ಎಂದ ಉಪಮನ್ಯು. "ಅಶ್ವಿನೀದೇವತೆಗಳು ನನಗೆ ಮರಳಿ ಕಣ್ಣು ಕೊಟ್ಟರು. ತಿನ್ನುವುದಕ್ಕೆಂದು ಹೋಳಿಗೆ ಕೊಟ್ಟರು." ನೇರ ಗುರುವಿನ ಕಡೆಗೇ ನೋಡುತ್ತ "ಆದರೆ ನಾನು ಅದನ್ನು ತಿನ್ನಲಿಲ್ಲ. ನನ್ನ ಮುಷ್ಟಿಯಲ್ಲಿ ಹಾಗೇ ಇಟ್ಟುಕೊಂಡಿದ್ದೇನೆ."

ಇಷ್ಟು ಹೇಳಿ ಕೈ ಬಿಚ್ಚಿದ, ಆದರೆ ಅಲ್ಲಿ, ಒಂದು ಮುಷ್ಟಿ ಕಾಡಿನ ಮಣ್ಣು ಮಾತ್ರ ಕಾಣಿಸಿತು.

"ನಾನು ಕನಸು ಕಂಡೆನೆ?" ಉಪಮನ್ಯು ಗುರುವನ್ನು ಕೇಳಿದ ನಿಬ್ಬೆರಗಾಗಿ.

"ಅಲ್ಲ, ನಿನಗೆ ಅದು ಕನಸು" ಎಂದ ಧೌಮ್ಯ. "ನಿನಗೆ ಅದು ಸತ್ಯವಾದ್ದು. ಕಣ್ಣು ಬಂದದ್ದು ಎಷ್ಟು ಸತ್ಯವೋ ಅಷ್ಟೇ ಸತ್ಯ" ಗುರುವಿನ ಕಣ್ಣಲ್ಲಿ ನಗು ಮಿನುಗಿತು. "ಉಪಮನ್ಯು, ಕಣ್ಣಿನ ಜತೆ ಹಸಿವನ್ನೂ ಪಡೆದುಕೊಂಡಿದ್ದೀ ಎಂದು ಭಾವಿಸಿದ್ದೇನೆ." ಇದಕ್ಕೆ ಶಿಷ್ಯ ಉತ್ತರಿಸುವ ಮೊದಲೇ ಗುರು ಹೇಳಿದ: "ನಿನ್ನೆ ರಾತ್ರಿ ನಾವೆಲ್ಲ ಉಪವಾಸದಿಂದಿದ್ದೆವು; ಯಾರೂ ನಿದ್ರೆ ಮಾಡಲಿಲ್ಲ. ಎಲ್ಲರೂ ಬನ್ನಿ. ತಣಿದ ರುಚಿಯಾದ ಅನ್ನವಿದೆ, ಮೊಸರಿದೆ, ತಿನ್ನೋಣ".

# ಭೀಮ ಕೊಂದ ಬಕಾಸುರ

ಪ್ರಸಿದ್ಧರಾದ ಐದು ಜನ ಪಾಂಡವ ಸಹೋದರರಲ್ಲಿ ಎರಡನೆಯವನೇ ಭೀಮ.. ನ್ಯಾಯವಾಗಿ ತಮಗೇ ಬರಬೇಕಾಗಿದ್ದ ರಾಜ್ಯಕ್ಕಾಗಿ ಅವರು ದಾಯಾದಿಗಳಾದ ನೂರು ಜನ ಕೌರವರೊಡನೆ ಯುದ್ಧ ಮಾಡಬೇಕಾಯಿತು. ಆದರೆ, ಕುರುಕ್ಷೇತ್ರದಲ್ಲಿ ಆ ಯುದ್ಧ ನಡೆದು ಪಾಂಡವರ ಹಿರಿಯನಾದ ಧರ್ಮರಾಯನು ಹಸ್ತಿನಾಪುರದ ರಾಜನಾಗುವುದಕ್ಕೆ ಮೊದಲು, ಈ ಪಾಂಡವರನ್ನು ನಾಶ ಮಾಡಲು ಕೌರವರು ಅನೇಕ ಹಂಚಿಕೆಗಳನ್ನು ಹಾಕಿದ್ದರು.

ಒಂದು ಸಲ, ಇಂಥ ಒಂದು ಮೋಸಕೃತ್ಯದಿಂದ ಪಾರಾಗಿ ಈ ಐವರು ಸಹೋದರರು ತಮ್ಮ ತಾಯಿಯ ಜತೆ ಏಕಚಕ್ರ ಎಂಬ ಶಾಂತವಾದ ಗ್ರಾಮಕ್ಕೆ ಬಂದರು. ಅಲೆದಾಟದಿಂದ ಬೇಸತ್ತು, ಯಾವುದಾದರೂ ಒಂದು ಕಡೆ ಕೆಲವು ಕಾಲವಾದರೂ ಶಾಂತವಾಗಿ ನೆಲೆಸಬೇಕು ಎಂಬ ಆಸೆಯಿಂದ, ತಮ್ಮ ದಾಯಾದಿಗೆ ತಾವಿರುವುದು ತಿಳಿಯುವವರೆಗಾದರೂ ಅಲ್ಲೇ ಮನೆ ಮಾಡಲು ಯೋಚಿಸಿದರು. ದಯಾಳುವಾದ ಗ್ರಾಮಸ್ಥನೊಬ್ಬ ಅವರಿಗೆ ವಾಸಕ್ಕೆ ತನ್ನ ದೊಡ್ಡ ಮನೆಯಲ್ಲಿ ಒಂದು ಭಾಗವನ್ನು ಬಿಟ್ಟು ಕೊಡುವುದಾಗಿ ಹೇಳಿದ. ಇವರು ಕೃತಜ್ಞರಾಗಿ ಅದನ್ನು ಒಪ್ಪಿಕೊಂಡರು.



ಒಂದು ದಿನ ಭೀಮ ತನ್ನ ತಾಯಿ ಕುಂತಿಯ ಜತೆ ಮಾತನಾಡುತ್ತ ಕೂತಿದ್ದಾಗ ಹೊರಗೆ ಯಾರೋ ಅಳುತ್ತಿರುವ ಸದ್ದು ಕೇಳಿತು. ಈ ಶೋಕಕ್ಕೆ ಕಾರಣವೇನು ಎಂದು ತಿಳಿಯಲು ಕುಂತಿ ತ್ವರೆಯಿಂದ ಎದ್ದು ಹೊರಟಳು. ತಮಗೆ ಮನೆ ಕೊಟ್ಟವರ, ಅದೇ ಮನೆಯ ಒಳಗಿನಿಂದ ಮಾತುಗಳು ಕೇಳಿ ಬಂದವು.

"ಈಗ ಇನ್ನು ಎಲ್ಲಿಗೆ ಹೋಗಲೂ ಸಾಧ್ಯವಿಲ್ಲ" ಎನ್ನುತ್ತಿದ್ದ ತಂದೆ, "ಮನೆಯಲ್ಲಿ ಯಾರೇ ಒಬ್ಬರನ್ನು ಬಲಿ ಕೊಡಲಾರೆವು. ಆದ್ದರಿಂದ ನಾವೆಲ್ಲರೂ ಸಾಯುವುದೇ ಗತಿ. ಬೇರೆ ಎಲ್ಲಿಗಾದರೂ ಹೋಗಿ ಬಿಡೋಣವೆಂದು ನಾನು ಮೊದಲಿನಿಂದ ನಿನಗೆ ಸಾರಿ ಸಾರಿ ಹೇಳಿದೆ. ನೀನು ಕೇಳಲಿಲ್ಲ. 'ನಾನು ಇಲ್ಲೇ ಹುಟ್ಟಿದ್ದು, ಇಲ್ಲೇ ಸಾಯುತ್ತೇನೆ' ಎಂದೆ. ಈಗ ನಿನ್ನ ಆಶೆ ತಾನಾಗಿಯೇ ಒಂದಕ್ಕೆ ನಾಲ್ಕಾಗಿ ನೆರವೇರುತ್ತದೆ. ನೀನೊಬ್ಬಳೇ ಅಲ್ಲ, ನಾವು ನಾಲ್ಕು ಜನವೂ ಇಲ್ಲೇ ಸಾಯುತ್ತೇವೆ."

ಈ ಮಾತುಗಳನ್ನು ಕೇಳಿ ಏನೂ ಅರ್ಥವಾಗದೆ ಆಘಾತಗೊಂಡ ಕುಂತಿ ಅಲ್ಲೇ ಅಂಟಿ ನಿಂತುಬಿಟ್ಟಳು. ಅಷ್ಟರಲ್ಲಿ ತಾಯಿಯ ಮಾತು ಕೇಳಿಸಿತು.

"ನಾವು ನಮ್ಮ ಮಕ್ಕಳು ಎಲ್ಲರೂ ಕೂಡಿ ಸಾಯುವುದಾದರೆ ಅದಕ್ಕಿಂತ ಹೆಚ್ಚೇನು ಬೇಕು? ಆದರೆ ಅಯ್ಯೋ, ನಮ್ಮಲ್ಲಿ ಒಬ್ಬರು ಮಾತ್ರ ಸಾಯಬೇಕಾಗಿ ಬಂದಿದೆ. ಈ ಬಗ್ಗೆ ನಾನು ಆಳವಾಗಿ ಯೋಚನೆ ಮಾಡಿದ್ದೇನೆ. ಈ ಚಿಕ್ಕ ಮಕ್ಕಳನ್ನು ಬಲಿಕೊಡುವುದಂತೂ ಊಹಿಸಲಿಕ್ಕೂ ಸಾಧ್ಯವಿಲ್ಲದ ಸಂಗತಿ. ಇನ್ನು ಉಳಿದವರು ನಾವಿಬ್ಬರು. ಒಂದುವೇಳೆ ನೀವು ಸಾಯುವುದಾದರೆ ಈ ಇಬ್ಬರು ಮಕ್ಕಳನ್ನು ಇಟ್ಟುಕೊಂಡು ನಾನು ಹೇಗೆ ತಾನೆ ಬದುಕಬಲ್ಲೆ? ಯಾವ ರೀತಿಯಿಂದ ಸಂಸಾರ ನಡೆಸಬಲ್ಲೆ? ಯಾವ ರೀತಿಯಲ್ಲಿ ದುಡಿದು ನ್ಯಾಯವಾದ ಜೀವನ ಸಾಗಿಸಬಲ್ಲೆ? ಈ ಚಿಕ್ಕ ಮಗಳನ್ನು ಸಾಕಿ ಮದುವೆ ಮಾಡುವುದಾಗಲಿ ಮತ್ತು ಈ ಗಂಡು ಶಿಶುವನ್ನು ಪಾಲಿಸಿ ದೊಡ್ಡವನನ್ನಾಗಿ ಮಾಡುವುದಾಗಲೀ ನನಗೆ ಸಾಧ್ಯವೇ? ಆದ ಕಾರಣ, ನೀವು ಈ ಮಕ್ಕಳನ್ನು ನೋಡಿಕೊಂಡು ಅವರ ಪಾಲನೆ ಪೋಷಣೆ ಮಾಡಿಕೊಳ್ಳಿ, ನಾನು ಹೋಗುತ್ತೇನೆ. ಈ ಸ್ಥಳವನ್ನು ಬಿಟ್ಟು ಬೇರೆಲ್ಲಿಗಾದರೂ ಹೋಗಬೇಕೆಂಬ ನಿಮ್ಮ ಆಸೆಗೆ ನಾನೇ ಸ್ವಾರ್ಥದಿಂದ ತಡೆ ಹಾಕಿದೆ, ಅದಕ್ಕಾಗಿ ನನಗೆ ನ್ಯಾಯವಾದ ಶಿಕ್ಷೆ ಆಗಲೇಬೇಕು. ಇನ್ನು ವಾದಿಸುವುದು ಬೇಡ."

ಕುಂತಿಗೆ ಈಗ ಅರ್ಥವಾಯಿತು, ದಯಾಳುವಾದ ಈ ಗ್ರಾಮಸ್ಥನ ಸಂಸಾರಕ್ಕೆ ಯಾವುದೋ ಭಯಂಕರ ಆಪತ್ತು ಬಂದಿದೆ ಎನ್ನುವುದು. ಈ ಹೊತ್ತಿನಲ್ಲಿ ತನ್ನಿಂದ ಏನಾದರೂ ಸಹಾಯವಾದೀತೋ ನೋಡೋಣ ಎಂದು ತಿಳಿಯಲು ಕುಂತಿ ಅವರ ಬಳಿಗೇ ನಡೆದಳು. ಬಳಿಗೆ ಹೋಗುತ್ತಿರುವಾಗಲೇ, ಆ ಸಣ್ಣ ಹುಡುಗಿ ತನ್ನ ತಾಯಿ ತಂದೆಯರಿಗೆ, "ನೀವು ತಮ್ಮನನ್ನು ಕಾಪಾಡಿಕೊಳ್ಳಿ, ನನ್ನನ್ನು ಅಲ್ಲಿಗೆ ಕಳಿಸಿ" ಎಂದು ಕಾಡಿಸತೊಡಗಿದ್ದಳು.



ಕುಂತಿ ಒಳಗೆ ಪ್ರವೇಶಿಸಿದಳು.

"ಮಧ್ಯೆ ಬಂದೆ, ಕ್ಷಮಿಸಿ" ಎಂದಳು. ಎಲ್ಲರೂ ಆಶ್ಚರ್ಯದಿಂದ ಇವಳ ಕಡೆ ತಿರುಗಿದರು. "ನೀವು ಆಡುತ್ತಿದ್ದ ಮಾತುಗಳನ್ನು ಕೇಳಿದೆ. ನಿಮಗೆ ಈಗ ಯಾವ ಆಪತ್ತು ಬಂದಿದೆ ಎಂಬುದನ್ನು ತಿಳಿಯಲು ಬಂದೆ. ಸಾಧ್ಯವಾದರೆ ನಾನು ನಿಮಗೆ ನೆರವಾಗುತ್ತೇನೆ. ನಿಮಗೆ ಭೀತಿ ತಂದಿರುವ ಈ ಆಪತ್ತನ್ನು ನಾವೆಲ್ಲರೂ ಕೂಡಿ ಪರಿಹರಿಸಿಕೊಳ್ಳಬಹುದು ಎಂದು ನನಗೆ ಭರವಸೆ ಇದೆ."

ಯಜಮಾನ ದುಃಖ ತುಂಬಿ ಹೇಳಿದ: "ತಾಯಿ, ನಿನ್ನ ಕರುಣೆ ಔದಾರ್ಯಗಳಿಗೆ ನಾವು ಕೃತಜ್ಞರು. ಆದರೆ ಮನುಷ್ಯರು ಯಾರೂ ನಮಗೆ ಸಹಾಯ ಮಾಡಲಾರರು. ದೇವರಿಗೆ ಮಾತ್ರವೇ ಸಾಧ್ಯ."

"ಇರಲಿ. ಅದೇನು ಕಥೆ ಹೇಳಿ" ಎಂದಳು ಕುಂತಿ.

"ಈ ದೇಶದ ರಾಜ ದುರ್ಬಲನಾಗಿದ್ದಾನೆ. ಪ್ರಜೆಗಳನ್ನು ರಕ್ಷಿಸಿಕೊಳ್ಳುವ ಚಾತುರ್ಯ ಆತನಿಗಿಲ್ಲ. ಮೇಲಾಗಿ ಅವನು ಶತಮೂರ್ಖ. ತಾನು ಆಲಸಿಯಾಗಿ, ರಾಜ್ಯದ ಬೇರೆ ಬೇರೆ ಭಾಗಗಳನ್ನು ತನ್ನ ಹೆಸರಲ್ಲಿ ಆಳುವುದಕ್ಕೆ ಅನೇಕ ದಳಪತಿಗಳನ್ನು ನೇಮಿಸಿದ್ದಾನೆ. ಈ ಗ್ರಾಮ ಮತ್ತು ಸುತ್ತಣ ಪ್ರದೇಶವನ್ನು ಆಳುವುದಕ್ಕೆ ನೇಮಕವಾಗಿರುವವನು ಬಕನೆಂಬ ಒಬ್ಬ ರಾಕ್ಷಸ. ಅವನು ಮನುಷ್ಯರನ್ನೇ ತಿನ್ನುತ್ತಾನೆ. ಬೆಟ್ಟದಂತೆ ಬೆಳೆದುಕೊಂಡಿದ್ದಾನೆ, ಕೂದಲುಗಳು ಕಾಡು ಬೆಳೆದ ಹಾಗೇ ಬೆಳೆದಿವೆ, ಕಣ್ಣುಗಳು ರಕ್ತ ಚಿಮ್ಮುತ್ತ ಭಯಂಕರವಾಗಿವೆ. ಅವನು ನಡೆದರೆ ನೆಲ ನಡುಗುತ್ತದೆ. ಅವನು ಗರ್ಜಿಸಿದರೆ ಆಕಾಶದಲ್ಲಿ ಪಕ್ಷಿಗಳು ಚದುರಿ ಹಾರಿಹೋಗುತ್ತವೆ. ಅವನಿಗೆ ಪ್ರತಿನಿತ್ಯವೂ ಒಂದುಗಾಡಿ ಅನ್ನ, ಎರಡು ಎಮ್ಮೆಗಳು ಮತ್ತು ಒಬ್ಬ ಮನುಷ್ಯ ಇಷ್ಟನ್ನು ತಿನ್ನಲು ಒದಗಿಸುತ್ತಿದ್ದರೆ ಮಾತ್ರ ನಾವೆಲ್ಲರೂ ಸುರಕ್ಷಿತರಾಗಿ ಇರುವುದು ಸಾಧ್ಯ. ಆದ್ದರಿಂದ ನಾವೆಲ್ಲರೂ ಕೂಡಿ, ದಿನಕ್ಕೆ ಒಂದೊಂದು ಮನೆಯವರು ಸರದಿಯ ಮೇಲೆ ಆತನಿಗೆ



ಆಹಾರ ಒದಗಿಸತಕ್ಕದ್ದು ಎಂದು ನಿರ್ಧಾರ ಮಾಡಿಕೊಂಡಿದ್ದೇವೆ. ನಾಳೆಗೆ ನಮ್ಮ ಸರದಿ. ನಮ್ಮಲ್ಲಿ ಇರುವ ನಾಲ್ಕು ಜನರಲ್ಲಿ ಒಬ್ಬರನ್ನು ಬಲಿಕೊಡಬೇಕಲ್ಲ ಯಾರನ್ನು ಕೊಡುವುದು ಎಂದು ಯೋಚಿಸುತ್ತಿದ್ದೇವೆ."

ಈ ಭಯಂಕರ ಕಥೆಯನ್ನು ಕೇಳಿ ಕುಂತಿ ತಲ್ಲಣಗೊಂಡಿದಳು. ಮಾತುಕಟ್ಟಿ ಹೋಗಿತ್ತು. ಆದರೆ, ಹೇಗಾದರೂ ಈ ಸಂಸಾರವನ್ನು ರಕ್ಷಿಸಲೇಬೇಕು ಎಂಬ ನಿಶ್ಚಿತ ನಿರ್ಧಾರಕ್ಕೆ ಬಂದಿದ್ದಳು. ತುಂಬಾ ಯೋಚಿಸಿ ಕೊನೆಯಲ್ಲಿ ಆಕೆ ಹೇಳಿದಳು: "ನೀವು ಒಪ್ಪುವುದಾದರೆ ನಾನು ಇದಕ್ಕೆ ಒಂದು ಪರಿಹಾರ ಹೇಳುತ್ತೇನೆ."

"ನೀನು ಏನು ಸೂಚನೆ ಕೊಟ್ಟರೂ ಒಪ್ಪುತ್ತೇವೆ. ಈಗ ನಮ್ಮ ಮನಸ್ಸು ಕೆಟ್ಟು ಹೋಗಿದೆ, ಏನನ್ನೂ ತಿಳಿಯಾಗಿ ಯೋಚಿಸುವುದಕ್ಕೂ ಆಗುತ್ತಿಲ್ಲ."

"ಹಾಗಿದ್ದರೆ ಕೇಳಿ" ಎಂದಳು ಕುಂತಿ, ದೃಢವಾಗಿ. "ನಿಮಗೆ ಒಬ್ಬನೇ ಗಂಡು ಮಗ, ಅದೂ ತುಂಬಾ ಚಿಕ್ಕವನು. ನನಗೆ ಐದು ಜನ ಬಲಶಾಲಿಗಳಾದ ಮಕ್ಕಳಿದ್ದಾರೆ. ಅವರಲ್ಲಿ ಒಬ್ಬ ರಾಕ್ಷಸನ ಆಹಾರಕ್ಕಾಗಿ ಅನ್ನದ ಬಂಡಿ ಮತ್ತು ಎಮ್ಮೆಗಳ ಜತೆ ಹೋಗಲಿ?

ಈ ಸೂಚನೆ ಕೇಳಿ ದಿಙ್ಮೂಢನಾಗಿ, ಯಜಮಾನ ಕೈಗಳಿಂದ ಕಿವಿ ಮುಚ್ಚಿಕೊಂಡ.

"ಅಮ್ಮಾ, ನಿಮ್ಮ ಸೂಚನೆಯ ಬಗ್ಗೆ ನಾವು ಯೋಚಿಸಲು ಕೂಡ ಸಾಧ್ಯವಿಲ್ಲ. ನಿಮ್ಮ ಒಬ್ಬ ಮಗನನ್ನು ಬಲಿಕೊಟ್ಟು ನಮ್ಮನ್ನು ಬದುಕಿಸಿಕೊಳ್ಳಲೆತ್ನಿಸುವುದು ಎಂಥ ಹೇಯ ಕೆಲಸ !"

ಉದ್ವೇಗಗೊಂಡಿದ್ದ ಯಜಮಾನನನ್ನು ಸಮಾಧಾನಗೊಳಿಸಿ ಕುಂತಿ ಪುನಃ ವಾದಿಸಿದಳು.

"ನನ್ನ ಮಕ್ಕಳ ವಿಷಯ ನಿಮಗೆ ತಿಳಿಯದು" ಮೇಲುನಗುತ್ತ ಹೆಮ್ಮೆಯಿಂದ ವಿವರಿಸಿದಳು ಕುಂತಿ. "ಈ ಕಾರ್ಯಕ್ಕಂತೂ ಒಬ್ಬನನ್ನು ನಾನು ಮನಸ್ಸಿನಲ್ಲಿ ನಿರ್ಧರಿಸಿಕೊಂಡು ಬಿಟ್ಟಿದ್ದೇನೆ. ನೀವು ನಿಮ್ಮ ಮಗನನ್ನು ಎಷ್ಟು ಪ್ರೀತಿಸುತ್ತೀರೋ ಅಷ್ಟೇ ನಾನೂ ಅವನನ್ನು ಪ್ರೀತಿಸುತ್ತೇನೆ. ಪ್ರೀತಿಯಿಲ್ಲದೇ ಆತನನ್ನು ರಾಕ್ಷಸನ ಹತ್ತಿರ ಕಳಿಸುವುದಲ್ಲ. ಆದರೆ, ರಾಕ್ಷಸರನ್ನು ನಾಶ ಮಾಡುವುದರಲ್ಲಿ ಆತ ನಿಸ್ಸೀಮ. ಅವನದು ದೈತ್ಯ ದೇಹ; ಆತ ವಾಯುದೇವನಿಗಿಂತ ವೇಗವಾಗಿ ಚಲಿಸಬಲ್ಲ. ಆ ಕಾರಣ ಹೇಳುತ್ತೇನೆ, ಆತನೇ ಬಕನ ಬಳಿ ಹೋಗಲಿ."

ಕುಂತಿ ಮನೆಗೆ ಮರಳಿ ತನ್ನ ಮಕ್ಕಳಿಗೆಲ್ಲ ಬಕಾಸುರನ ಬಗ್ಗೆ ಹೇಳಿದಳು. ಆ ನರ ಭಕ್ಷಕನನ್ನು ವಿಚಾರಿಸಿಕೊಳ್ಳಲು ತನ್ನ ಮಕ್ಕಳಲ್ಲಿ ಒಬ್ಬನನ್ನು ಕಳಿಸುವುದಾಗಿ ವಚನ ಕೊಟ್ಟಿದ್ದನ್ನು ಹೇಳಿದಳು.

ಭೀಮ ಗಹಗಹಿಸಿದ. "ಅಂದರೆ ನನ್ನನ್ನೇ ಅದಕ್ಕೆ ಆರಿಸಿದ್ದಿಯೇ, ಗೊತ್ತಾಯಿತು" ಎಂದ. "ಕೆಲಸ ಆಯಿತೆಂದೇ ತಿಳಿ".

ಮಾರನೆಯ ದಿನ ಭೀಮ ಬಕನ ಭೋಜನವನ್ನು ಸಿದ್ಧ ಮಾಡಿಕೊಂಡು, ಆನಂದದಿಂದ ಆ ರಾಕ್ಷಸನಿದ್ದ ಕಾಡಿನ ಕಡೆ ಹೊರಟ. ಬಕ ಮನೆಯಲ್ಲಿ ಕೂತು ಈ ಕಡೆಗೇ ಗಮನಿಸುತ್ತಿದ್ದ. ಬಂಡಿ ಎಳೆದುಕೊಂಡು ಬರುತ್ತಿದ್ದವನ ಎತ್ತರದ ಭಾರೀ ದೇಹವನ್ನು ಮಿಂಚುತ್ತಿದ್ದ ಮಾಂಸಖಂಡ ಗಳನ್ನು ಗಮನಿಸಿದ. ನೋಡಿ ಸಂತೃಪ್ತಿಯಿಂದ ತಲೆತೂಗಿದ. ನಿಜವಾಗಿ ಈ ಮನುಷ್ಯ ಸಂತುಷ್ಟಿ ಕೊಡುವ ಆಹಾರವಾಗಬಲ್ಲ ! ಆದರೆ ಮರುಕ್ಷಣ ಆತ ಕ್ರೋಧದಿಂದ ಉರಿದ. ಎಮ್ಮೆಗಳೇ ಕಾಣಿಸಲಿಲ್ಲ !.

ಇದೇನು ಎಂದು ಗಲಿಬಿಲಿಯಾಯಿತು. ಅದಾದ ಮೇಲೆ ಆಶ್ಚರ್ಯವಾಯಿತು. ಕೊನೆ ಯಲ್ಲಿ ಭೀಮ ಏನು ಮಾಡುತ್ತಿದ್ದಾನೆಂಬುದನ್ನು ಕಂಡು ಕ್ರೋಧ ಪ್ರಜ್ವಲಿಸಿತು. ಭೀಮ ಅಷ್ಟರಲ್ಲಿ ನೆಲದ ಮೇಲೆ ಕೂತು, ಎದುರಲ್ಲಿ ಅಷ್ಟಗಲದ ಬಾಳೆಯ ಎಲೆ ಹರಡಿಕೊಂಡು ಬಂಡಿಯಲ್ಲಿದ್ದ ಆಹಾರವನ್ನೆಲ್ಲ ದೊಡ್ಡ ಸನಿಕೆಯಿಂದ ಎಳೆದು ರಾಶಿಹಾಕಿಕೊಳ್ಳುತ್ತ ಕಬಳಿಸ ತೊಡಗಿದ್ದ. ಆ ರಾಕ್ಷಸ ನೋಡು ನೋಡುತ್ತಿದ್ದಂತೆ, ಅನ್ನ ಕಾಯಿಪಲ್ಲೆ ಮತ್ತು ಇತರ ಭಕ್ಷ್ಯ ಭೋಜ್ಯಗಳೆಲ್ಲ ತಳವಿಲ್ಲದ ಬಾವಿಯಂತಿದ್ದ ಭೀಮನ ಹೊಟ್ಟೆಯೊಳಕ್ಕೆ ಎವೆ ಮುಚ್ಚುವುದ ರೊಳಗೆ ಮಾಯವಾಗುತ್ತಿದ್ದವು.

ಬಕ ಕಿವಿಗಡಚಿಕ್ಕುವಂತೆ ಆರ್ಭಟಿಸಿ ಮುಂದೆ ನುಗ್ಗಿದ. ಭೀಮನಿಂದ ಕೆಲವೇ ಗಜ ದೂರದಲ್ಲಿ ಬಂದು ನಿಂತ. ಭೀಮ ಉದಾಸೀನನಾಗಿ ತಾಳೆಯ ಮರದಂತಿದ್ದ ಬಕನ ಕಾಲುಗಳ ಕಡೆ ನೋಡಿದ. ಮತ್ತೆ ಈ ಕಡೆ ತಿರುಗಿ ಇನ್ನೊಂದು ರಾಶಿ ಅನ್ನವನ್ನು ಕಬಳಿಸತೊಡಗಿದ. ಬಕ ಹತ್ತಿರಕ್ಕೆ ಬಂದ.

"ಬಕನ ಕೋಪವನ್ನು ಕೆರಳಿಸಿ ಕರೆಯುವ ಧೈರ್ಯ ಮಾಡಿದ್ದೀಯಲ್ಲ ನೀನು, ಯಾರಯ್ಯಾ ಮೂರ್ಖ?" ಆತ ಗುಡುಗಿದ, "ನಿನ್ನನ್ನು ಕಳಿಸಿದ್ದು ನನ್ನ ಭೋಜನಕ್ಕೆ ಎನ್ನುವುದು ತಿಳಿಯದೆ? ಮತ್ತೆ, ಎಲ್ಲಿ ನನಗೆ ತಿನ್ನಲು ಎಮ್ಮೆಗಳು?"

ಭೀಮ ಸಾವಧಾನವಾಗಿ ಮತ್ತೊಂದು ರಾಶಿ ಅನ್ನವನ್ನು ಬಾಯಿ ತುಂಬುವಷ್ಟು ಪಲ್ಯವನ್ನು ಕಬಳಿಸಿಕೊಂಡು, ಖಡಾ ಖಂಡಿತವಾಗಿ ಹೇಳಿದ: "ಎಮ್ಮೆಗಳಿಲ್ಲ !"

"ಏನೆನ್ನುತ್ತೀಯೆ? ಎಮ್ಮೆಗಳಿಲ್ಲವೆ?" ಬಕ ಹರಿಹಾಯ್ದು ಕೂಗಿದ.

"ಊರಲ್ಲಿ ಹಸು ಎಮ್ಮೆಗಳು ಕಡಿಮೆಯಾಗಿ ಬಿಟ್ಟಿದ್ದಾವೆ" ಭೀಮ ಶಾಂತನಾಗಿ ವಿವರಿಸಿದ್ದ

"ನಮ್ಮ ಹಸು ಎಮ್ಮೆಗಳು ನಮಗೇ ಬೇಕು. ಊರಿನ ಮಕ್ಕಳಿಗೆಲ್ಲ ಹಾಲು ಬೇಕಲ್ಲ."



ಕ್ರೋಧ ತಪ್ತನಾಗಿ ಮಾತು ಹೊರಡದೆ ಬಕ ಧಾವಿಸಿ ಬಂದ. ಭೀಮ ಕೊಂಚವೂ ಅಲುಗದೇ ಇದ್ದ. ಬಕಾಸುರ ಭೀಮನ ಹಿಂದೆ ನಿಂತುಕೊಂಡು ಅವನನ್ನು ಎತ್ತಲು ಹವಣಿಸಿದ. ಆಚೆ ಈಚೆ ಎಳೆದ ದೂಡಿದ—ಏನು ಮಾಡಿದರೂ ಆ ಪಾಂಡವ ಯೋಧನನ್ನು ಅಲುಗಿಸುವುದಕ್ಕೂ ಸಾಧ್ಯವಾಗಲಿಲ್ಲ. ಪುನಃ ಬಕ ಮಹಾವೃಕ್ಷಗಳಂತಿದ್ದ ತನ್ನ ಹಸ್ತಗಳನ್ನು ಭೀಮನ ಕುತ್ತಿಗೆಗೆ ತಂದು ಬಡಿದ.

"ಓಹ್, ಸಾಕು ಹೋಗು ಹೋಗು" ಎಂದು ಭೀಮ, ಕುತ್ತಿಗೆ ಕೊಡವಿಕೊಂಡು ಬಕನ ಏಟಿನಿಂದ ಆತನ ಕೂದಲಷ್ಟೇ ಕೊಂಚ ಅಲ್ಲಾಡಿತ್ತು. "ಒಳ್ಳೇ ಕಿರಿಕಿರಿ ಮಾಡುತ್ತೀಯಲ್ಲ. ಈ ವಿಶೇಷ ಭೋಜನದ ಸೊಗಸನ್ನು ಹಾಳು ಮಾಡುತ್ತಿದ್ದೀಯೆ."

ಬಕ ಸ್ತಂಭಿತನಾಗಿ ನಿಂತುಬಿಟ್ಟ. ಭೀಮ ಬಂಡಿಯಲ್ಲಿರುವ ಆಹಾರವನ್ನೆಲ್ಲಾ ಪೂರೈಸಿ, ವಿರಾಮವಾಗಿ ಕೈತೊಳೆದುಕೊಳ್ಳುತ್ತಿದ್ದುದ್ದನ್ನು ನೋಡುತ್ತಿದ್ದ.

"ಆಮೇಲೆ ಭೀಮ ಹೇಳಿದ: ಈಗ ನೋಡು. ನೀನು ಸಿದ್ಧನಾಗಿದ್ದರೆ ಪುಟ್ಟದೊಂದು ಮಲ್ಲಯುದ್ಧ ಮುಗಿಸಿಬಿಡೋಣ".

ಬಕ ತನ್ನ ಮಾಂಸಖಂಡಗಳನ್ನು ಬಿಗಿಗೊಳಿಸಿಕೊಂಡು ಭೀಮನ ಕಡೆ ಚಂಗನೆ ಹಾರಿದ. ಭೀಮ ಮಿಂಚಿನ ಹಾಗೆ ಚಲಿಸಿದ. ತನ್ನ ಕೈಕಾಲುಗಳೆರಡನ್ನೂ ಏಕಕಾಲದಲ್ಲಿ ಬಳಸಿ ಆ ರಾಕ್ಷಸ ನನ್ನು ನೆಲಕ್ಕೆ ತಳ್ಳಿ ಅವನ ಹೊಟ್ಟೆಯ ಮೇಲೆ ಏರಿ ಕುಳಿತ.

ಬಕ ಹೇಗೋ ಉರುಳಿ ತಪ್ಪಿಸಿಕೊಂಡು, ಹತ್ತಿರದಲ್ಲಿದ್ದ ಭಾರೀ ಮರವೊಂದನ್ನು ಬುಡ ಸಹಿತ ಕಿತ್ತುಕೊಂಡು ಭೀಮನ ಮೇಲೆ ಏರಿ ಬಂದ. ಭೀಮ ಕೂಡ ತನ್ನ ಬಲಗೈಯಿಂದ ಇನ್ನೊಂದು ಮರವನ್ನು ಕಿತ್ತುಕೊಂಡು ಅದನ್ನು ಅವನಿಗೆ ಅಡ್ಡವಾಗಿ ಎದುರು ಹಿಡಿದು ನಿಂತ.

ಆಮೇಲೆ ಒಬ್ಬರಿಗೊಬ್ಬರು ಕಿತ್ತ ಮರಗಳನ್ನೆಸೆಯುತ್ತ ಹೋರಾಡಿದರು. ಈ ಕೋಲಾಹಲದಿಂದ ಕ್ಷೋಭೆಗೊಂಡು ಮರದ ಮೇಲಿದ್ದ ಹಕ್ಕಿಗಳು ಚೀರಾಡತೊಡಗಿದವು; ಅಲ್ಲಿಂದ ಹಾರಿ ಹೋಗಿ ದೂರ ಕೂತು ಇವರ ಹೋರಾಟ ನೋಡತೊಡಗಿದವು. ಪರ್ವತಗಳ ಹಾಗಿದ್ದ ಈ ಇಬ್ಬರು ಸೆಣಸಾಡುತ್ತಿದ್ದಾಗ ಎಷ್ಟೋ ದೂರದ ತನಕವೂ ಭೂಮಿ ಕಂಪಿಸುತ್ತಿರುವುದು ಗೊತ್ತಾಗುತ್ತಿತ್ತು.





ಬಹುಬೇಗ ಬಕಾಸುರ ದಣಿವಿನಿಂದ ಕಂಪಿಸತೊಡಗಿದ. ಅವನಿಗೆ ಹೇಗಾದರೂ ತನ್ನನು ಕೊಲ್ಲುವುದಕ್ಕೆ ಬಂದಿದ್ದ ಈ ದೈತ್ಯನಿಂದ ತಪ್ಪಿಸಿಕೊಳ್ಳುವುದೊಂದೇ ಆಸೆ ಉಳಿದಿತ್ತು. ಆದರೆ ಭೀಮ ಅವನನ್ನು ಬಿಡಬೇಕಲ್ಲ. ಆ ರಾಕ್ಷಸ ಓಡಿ ಹೋಗಲು ಪ್ರಯತ್ನಿಸಿದಾಗೆಲ್ಲ ಭೀಮ ಅವನನ್ನು ಹಿಂದಕ್ಕೆ ಎಳೆದು ತಂದು ಬೆನ್ನಿನ ಮೇಲೆ ಮತ್ತೆ ನಾಲ್ಕು ಗುದ್ದು ಹಾಕುತ್ತಿದ್ದ. ಕೊನೆಯಲ್ಲಿ ಭೀಮ ಒಂದು ಭಾರೀ ಏಟು ಕೊಟ್ಟಾಗ ಬಕ ನೆಲಕ್ಕೆ ಕವುಚಿ ಬಿದ್ದ. ಅವನ ಮೇಲೆ ಹತ್ತಿ ಭೀಮ ಆತನ ಕಾಲುಗಳನ್ನೆತ್ತಿ ತಲೆಗೆ ಮುಟ್ಟುವ ಹಾಗೆ ಬಗ್ಗಿಸಿದ. ಬಕನ ಬೆನ್ನು ಮೂಳೆಗಳು ಹುಡಿಯಾದವು. ಕಾಡಿನಲ್ಲಿದ್ದ ಹುಲಿ ಸಿಂಹಗಳು ಕೂಡ ಬೆದರಿ ಗುಹೆ ಸೇರುವ ಹಾಗೆ ಬಕಾಸುರ ಭಯಂಕರವಾಗಿ ಗರ್ಜಿಸಿ ಜೀವ ಬಿಟ್ಟ.

ಸಾಯುತ್ತಿರುವ ಬಕನ ಕೂಗು ಕೇಳಿ ಅವನ ಪರಿವಾರದವರೆಲ್ಲ ಬಯಲಾಗಿ ಹೋಗಿದ್ದ ಆ ಕಾಡು ಪ್ರದೇಶಕ್ಕೆ ಧಾವಿಸಿ ಬಂದರು. ಭೀಮನ ಕಾಲಿಗೆ ಬಿದ್ದು ಆತನ ದಯೆ ಬೇಡಿಕೊಂಡರು. ಭೀಮನ ಮುಖವೇನೋ ಕಠಿನವಾಗಿಯೇ ಇತ್ತು, ಆದರೆ ಮಾತು ಸೂಕ್ತವಾಗಿತ್ತು.

ಆತ ಹೇಳಿದ: "ಒಂದು ನಿಯಮವನ್ನು ಒಪ್ಪುವುದಾದರೆ ನೀವೆಲ್ಲ ಈ ಕಾಡಿನಲ್ಲಿ ಮುಂದೂ ಬದುಕಬಹುದು. ನೀವು ಮನುಷ್ಯರನ್ನು ತಿನ್ನುವುದನ್ನು ಬಿಟ್ಟು ಬಿಡಬೇಕು. ಅದಲ್ಲದೆ ಏಕ



ಚಕ್ರದ ಒಂದು ನರಪ್ರಾಣಿಯನ್ನಾದರೂ ಮುಟ್ಟುವುದಾದರೆ ಮೊದಲು ನನ್ನನ್ನು ತಿಂದು ಹೋಗಬೇಕಾದೀತು."

ಆ ರಾಕ್ಷಸನ ಪರಿವಾರದ ಎಲ್ಲರೂ, ಸಣ್ಣ ಮಕ್ಕಳು ಕೂಡ, ಮನುಷ್ಯ ಮಾಂಸ ತಿನ್ನುವ ತಮ್ಮ ಅಭ್ಯಾಸವನ್ನು ಬಿಟ್ಟು ಬಿಡುವುದಾಗಿ ಸಮ್ಮತಿಯಿಂದ ವಚನ ಕೊಟ್ಟರು.

ಆಮೇಲೆ ಭೀಮ ಬಕಾಸುರನ ದೇಹವನ್ನು ಗ್ರಾಮದ ಹೊರಭಾಗಕ್ಕೆ ಎಳೆದೊಯ್ದು ಕೆಡವಿದ. ಅಲ್ಲಿಂದ ಈ ಸಂತೋಷದ ಸುದ್ದಿಯನ್ನು ತಿಳಿಸುವುದಕ್ಕೆ ತಾಯಿಯ ಬಳಿಗೆ ನಡೆದ.



# ಖಾಂಡವ ದಹನ

ಒಂದು ದಿನ, ಕುರುಕ್ಷೇತ್ರದ ಯುದ್ಧವೆಲ್ಲ ಮುಗಿದು ಯುಧಿಷ್ಠಿರನಿಗೆ ಹಸ್ತಿನಾಪುರದ ರಾಜಪಟ್ಟ ಕಟ್ಟಿಯಾದ ಮೇಲೆ, ಕೃಷ್ಣ ಮತ್ತು ಅರ್ಜುನರು ಯಮುನಾ ನದಿಯ ತೀರದಲ್ಲಿ ಸಂಜೆಯ ತಂಗಾಳಿಯನ್ನು ಸೇವಿಸುತ್ತ ಕುಳಿತ್ತಿದ್ದರು. ಯುದ್ಧ ಮುಗಿದ ಮೇಲೆ ಬದುಕು ಶಾಂತವಾಗಿತ್ತು, ಒಂದು ರೀತಿಯಲ್ಲಿ ಬೇಸರ ಬರುವಷ್ಟು ಶಾಂತವಾಗಿಬಿಟ್ಟಿತ್ತು. ಸಾಹಸ ಉದ್ರೇಕಗಳೇ ಅವರಿಗೆ ಹರ್ಷಕೊಡುತ್ತಿದ್ದವು.

ಅಲ್ಲಿ ಕೂತು ಅವರು ತಮ್ಮ ಹೊಸ ರಾಜಸಭೆಯ ಮಂತ್ರಿಗಳು ಮನ್ನೆಯರ ಬಗ್ಗೆ ಲೋಕಾಭಿರಾಮವಾಗಿ ಮಾತನಾಡುತ್ತಿದ್ದಾಗ, ಗೌರವಸ್ಥನ ಹಾಗೆ ಆದರೆ ರೋಗದಿಂದ ವ್ಯಾಕುಲನಾಗಿರುವವನ ಹಾಗೆ ಕಾಣುತ್ತಿದ್ದ ಒಬ್ಬ ಎತ್ತರವಾದ ಮನುಷ್ಯ ತಮ್ಮ ಕಡೆಗೆ ಬರುತ್ತಿದ್ದುದನ್ನು ಕಂಡರು. ಒಂದೊಂದು ಹೆಜ್ಜೆಯನ್ನಿಡುವುದೂ ಅತಿ ಕಷ್ಟವೆನ್ನುವಂತೆ ಆತ ನಡೆದು ಬರುತ್ತಿದ್ದ. ಸ್ವಲ್ಪ ಹೊತ್ತಿನಲ್ಲಿ ಆತ ಇವರ ಸಮೀಪಕ್ಕೆ ಬಂದು ದೈನ್ಯದಿಂದ ಹೇಳಿದ: "ಆಹಾರ, ಆಹಾರ ಕೊಡಿ. ಹಸಿವೋ ಹಸಿವು."

ಕೃಷ್ಣಾರ್ಜುನರಿಬ್ಬರೂ ಏಕಕಂಠದಲ್ಲಿಯೇ ಹೇಳಿದರು: "ಆಗಲಿ. ಈ ಕ್ಷಣದಲ್ಲೇ ನಿನ್ನ ಜೀವಕ್ಕೆ ಸಂತೃಪ್ತಿಯಾಗುವಷ್ಟು ಆಹಾರ ಕೊಡಿಸುತ್ತೇವೆ. ಕುಳಿತುಕೊ. ಸ್ವಲ್ಪ ವಿಶ್ರಮಿಸು. ಅಷ್ಟರಲ್ಲಿ ಆಹಾರ ತರಿಸುತ್ತೇವೆ."

ಆದರೆ ಆ ಹೊಸಬ ತಲೆ ಅಲ್ಲಾಡಿಸಿ ಹೇಳಿದ: "ನನಗೆ ಈ ಸಾಮಾನ್ಯ ಆಹಾರ ಬೇಡ. ಬಾಯಿ ತುಂಬ ಮೆಲ್ಲುವಂತಹ ಸಮೃದ್ಧ ಆಹಾರ ಬೇಕು. ನಿಮಗೆ ನನ್ನ ಗುರುತು ಸಿಕ್ಕಲಿಲ್ಲವೆ? ನಾನು ಅಗ್ನಿ."

ಕೃಷ್ಣಾರ್ಜುನರು ದೃಷ್ಟಿಯಿಟ್ಟು ನೋಡಿದರು. ಆತ ಅಗ್ನಿದೇವನೇ ಹೌದೆಂಬುದು ತಿಳಿಯಿತ್ತು. ಆತ ಗುರುತು ಸಿಗಲಾರದಷ್ಟು ಬದಲಾಗಿಬಿಟ್ಟಿದ್ದ. ಇಬ್ಬರೂ ಎದ್ದು ಆತನಿಗೆ ಗೌರವದಿಂದ ನಮಸ್ಕರಿಸಿ, ಆಸನವನ್ನು ತೋರಿಸಿ ಕೂರಲು ಬೇಡಿ ಆತನ ಕುಶಲವನ್ನು ವಿಚಾರಿಸಿದರು. ಆತನಿಗೆ ಏನಾದರೂ ರೋಗವಾಗಿತ್ತೇ? ಯಾವ ವಿಶೇಷ ಆಹಾರ ಆತನಿಗೆ ಬೇಕಾಗಿದೆ? ಸಿಗುವುದು ಎಷ್ಟು ಕಷ್ಟಸಾಧ್ಯವಾಗಿದ್ದರೂ ಸರಿಯೆ, ಅದನ್ನು ತರಿಸಿ ಬೇಕಾದ ಹಾಗೆ ಅಣಿಗೊಳಿಸಿ ನೀಡುವುದಾಗಿ ಆಶ್ವಾಸನೆ ಕೊಟ್ಟರು.



ಅಗ್ನಿ ಬಳಲಿಕೆಯಿಂದಲೇ ಹೇಳಿದ: "ಹೊಸದಾಗಿ ಮಾಡಬೇಕಾದ್ದು ಏನೂ ಇಲ್ಲ. ನನ್ನ ಆಹಾರ ಈಗಾಗಲೇ ಸಿದ್ಧವಾಗಿ ಕಾದಿದೆ."

"ಎಲ್ಲಿ? ಯಾವ ಆಹಾರ?"

"ಖಾಂಡವ ವನವಿದೆಯಲ್ಲ, ಅದೇ."

"ಅಂದರೆ ಆ ಆಹಾರ ಖಾಂಡವ ವನದಲ್ಲೇ ಇದೆಯೆ?"

"ಇಲ್ಲ. ಖಾಂಡವ ವನವೇ ನನ್ನ ಆಹಾರ."

"ಏನು?" ಕೃಷ್ಣ ಆಶ್ಚರ್ಯದಿಂದ ಪ್ರಶ್ನಿಸಿದ. "ಒಂದು ವನವನ್ನೇ ಕಬಳಿಸಬೇಕೆಂಬುದು ನಿನ್ನ ಆಸೆಯೇ?"

"ಹೌದು" ಎಂದ ಅಗ್ನಿ. "ಅದಕ್ಕೆ ಕಾರಣ ಹೇಳುತ್ತೇನೆ, ಕೇಳು. ಶ್ವೇತಕಿ ಎಂಬ ರಾಜನ ಬಗ್ಗೆ ಕೇಳಿದ್ದೀರಾ?"

ಅರ್ಜುನ ಹೇಳಿದ: "ಹೌದು. ಅಸಂಖ್ಯಾತವಾದ ಧರ್ಮ ಕಾರ್ಯಗಳು ಯಜ್ಞಯಾಗಾದಿಗಳು ಇವನ್ನು ಮಾಡಿ ಕೀರ್ತಿಗೊಂಡು ಪ್ರಸಿದ್ಧನಾದ ಅದೇ ರಾಜನಲ್ಲವೆ?"

ಅಗ್ನಿ ಮಂಕಾಗಿಯೇ ಹೇಳಿದ: "ಅವನೇ. ಶ್ವೇತಕಿ ಸ್ವರ್ಗಕ್ಕೆ ಹೋಗುವುದು ನಿಶ್ಚಯ. ಆದರೆ ಈಗ ಆತ ಭೂಮಿಯ ಮೇಲಿರುವಾಗ ಅವನ ರಾಜ್ಯದ ಯಾವೊಬ್ಬ ಬ್ರಾಹ್ಮಣನೂ ಆತನ ಜತೆ ಮಾತನಾಡುವುದಿಲ್ಲ."

"ಯಾಕೆ?" ಅರ್ಜುನ ಪ್ರಶ್ನೆ ಮಾಡಿದ.

"ಅವರೆಲ್ಲ ಆತನ ಸೇವೆಯಲ್ಲಿ ಕುರುಡರಾಗಿ ಹೋಗಿದ್ದಾರೆ." ಅಗ್ನಿ ವಿವರಿಸಿದ. "ದಿನ ತಪ್ಪದೆ ಪ್ರತಿ ನಿತ್ಯವೂ ಮಾಸ ಮಾಸ ಪರ್ಯಂತ ಹೊಗೆಯಾಡುವ ಬೆಂಕಿಯ ಎದುರು ಕುಳಿತು ವೇದ ಪಠಣ ಮಾಡುತ್ತಿದ್ದರೆ ಮತ್ತೇನಾಗಲು ಸಾಧ್ಯ? ಹೊಗೆಗೆ ನಾನು ಜವಾಬ್ದಾರನಲ್ಲ. ದೇಶದಲ್ಲಿದ್ದ ಎಲ್ಲ ಒಣ ಮರಗಳೂ ತೀರಿಹೋದ ಮೇಲೆ ಅವರು ಹಸಿಕೊಂಬೆಗಳಿಂದ ನನ್ನನ್ನು ಉರಿಸಲು ಪ್ರಯತ್ನಪಟ್ಟರು. ಹಾಗಾಗಿ ಹೊಗೆಯನ್ನು ನಿವಾರಿಸಲಾಗಲಿಲ್ಲ. ಅದು ಆ ಬಡ ಬ್ರಾಹ್ಮಣರ ಕಣ್ಣು ಗಂಟಲುಗಳನ್ನು ಹಾಳು ಮಾಡಿತು. ಪರಿಣಾಮವೇಂದರೆ ರಾಜ ತನ್ನ ಕೊನೆಯ ಯಾಗದಲ್ಲಿ ಪೌರೋಹಿತ್ಯ ನಡೆಸುವುದಕ್ಕಾಗಿ ಪಕ್ಕದ ರಾಜ್ಯದಿಂದ ಬ್ರಾಹ್ಮಣರನ್ನು ಕರೆಸಬೇಕಾಯಿತು."

"ಈ ಧಾರ್ಮಿಕ ಯಜ್ಞಯಾಗಾದಿಗಳು ಬಹಳ ಕಾಲದಿಂದ ನಡೆಯುತ್ತ ಬಂದಿವೆ ಎನ್ನುತ್ತೀಯಾ?" ಎಂದು ಕೇಳಿದ ಅರ್ಜುನ. ಆತ ಕೃಷ್ಣನ ಕಡೆ ಮುಖ ತಿರುಗಿಸಲಿಲ್ಲ, ಇಬ್ಬರಿಗೂ ಒಮ್ಮೆಲೇ ನಗು ಉಕ್ಕಿಬಿಟ್ಟೀತೆಂದು.

"ವರ್ಷಾನುವರ್ಷ" ಎಂದ ಅಗ್ನಿ. ಸೋತ ದನಿಯಲ್ಲಿ. "ಶ್ವೇತಕಿ ಒಂದು ಯಜ್ಞ ಪೂರೈಸುವುದರೊಳಗಾಗಿ ಇನ್ನೊಂದನ್ನು ಪ್ರಾರಂಭಿಸಿರುತ್ತಿದ್ದ. ಕ್ಷತ್ರಿಯ ರಾಜರೆಲ್ಲರೂ ಮಾಡಬೇಕಾದಂಥ ಐದು ಮಹಾಯಜ್ಞಗಳನ್ನೂ ಆತ ನಡೆಸಿದ. ಆಮೇಲೆ ಒಂದು ಸಾವಿರ ಬ್ರಾಹ್ಮಣರಿಗೆ ದಕ್ಷಿಣೆ ನೀಡಲಿಕ್ಕಾಗಿ ಮತ್ತೊಂದು ಯಾಗ ನಡೆಸಿದ. ಇದಾದ ಮೇಲೆ, ತನ್ನ ರಾಜ್ಯದಲ್ಲಿರುವ ಸ್ತ್ರೀಯರೂ ಬಾಲಕರೂ ಹರ್ಷಾರೋಗ್ಯಗಳಿಂದ ಸಮೃದ್ಧರಾಗಿರುವಂತೆ ದೇವತೆಗಳು ಕೃಪೆ ಮಾಡಲೆಂದು, ಅವರ ಪ್ರೀತ್ಯರ್ಥ ಮತ್ತೂ ಒಂದನ್ನು ಕೈಕೊಂಡ."

"ಎಂಥಾ ಉದಾರಿಯಾದ ರಾಜನಿಗೆ ಕೂಡ ಹೆಚ್ಚೆನಿಸುವಂಥದೇ ಸರಿ" ಎಂದ ಕೃಷ್ಣ ಗಂಭೀರನಾಗಿ.

"ನೋಡು, ಈಗ ಆದರಿಂದ ನನಗೆ ಎಂಥ ಸಂಕಟವಾಗಿದೆ" ಎಂದ ಅಗ್ನಿ, ನಿಟ್ಟುಸಿರು ಬಿಡುತ್ತ. "ನನ್ನ ಅವಸ್ಥೆ ನೋಡು! ನಾನು ಇಲ್ಲಿ ಬಂದಾಗ ನಿಮಗೆ ಗುರುತು ಕೂಡ ಸಿಕ್ಕಲಿಲ್ಲ. ಹಾಗಾಗಿ ಬಿಟ್ಟಿದ್ದೇನೆ. ಕೊನೆಯೇ ಇಲ್ಲದ ಈ ಅಸಂಖ್ಯಾತ ಯಜ್ಞಗಳಲ್ಲಿ, ಹಂಡೆಗಟ್ಟಲೆ ತುಪ್ಪ ಸುರಿದು, ಅದೇ ನನ್ನ ಆಹಾರವಾಗಿಬಿಟ್ಟಿದೆ. ವರ್ಷಗಟ್ಟಲೆ ಹೀಗೆ ಬರೀ ತುಪ್ಪವನ್ನೇ ತಿನ್ನು

ತ್ತಿದ್ದರೆ ನನ್ನ ಗತಿ ಏನಾಗಬೇಡ! ನನ್ನ ವರ್ಚಸ್ಸು ನೋಡಿ. ಸ್ತ್ರೀಯರೂ ಕೂಡ ನೋಡಿ ಅಸೂಯೆ ಪಡುತ್ತಿದ್ದ ಆ ನನ್ನ ತೇಜಸ್ಸು, ಹೊಳಪು ಉಜ್ವಲತೆ—ಎಲ್ಲ ಏನಾದವು? ಈಗ ಆರೋಗ್ಯಕರವಾದ ಪುಷ್ಟಿಯ ಆಹಾರಕ್ಕಾಗಿ ನಾನು ಬಾಯಿ ಬಿಡುತ್ತಿದ್ದೇನೆ. ಬಳಲಿ ದುರ್ಬಲ ವಾಗಿಬಿಟ್ಟಿದ್ದೇನೆ."

"ಅದಕ್ಕಾಗಿಯೇ ಈಗ ನಿನಗೆ ಖಾಂಡವ ವನವನ್ನು ಕಬಳಿಸುವ ಆಸೆಯೆ?"

"ಹೌದು, ಅದು ಒಂದು ಕಾರಣ. ಖಾಂಡವ ವನದಲ್ಲಿ ನಾನು ಅಪೇಕ್ಷೆ ಪಡುವಂಥ ಎಲ್ಲ ವಸ್ತುಗಳೂ ಇವೆ: ನನ್ನ ಬಾಯಲ್ಲಿ ಕಟಗುಟ್ಟಿ ಮುರಿಯುವ ಒಣಮರಗಳು, ನನ್ನ ಅನೇಕ ನಾಲಗೆಗಳಲ್ಲಿ ಒಂದೊಂದಕ್ಕೂ ನೆಕ್ಕಲು ಸಿಗುವ ರಸವತ್ತಾದ ಹಸಿರು ಗಿಡಬಳ್ಳಿಗಳು, ಪೊದೆಗಳು, ಜೇನಿನ ಹಾಗೆ ನಮಗೆ ರುಚಿ ಕೊಡುವ ಕಾಡು ಮೃಗಗಳು ಕೊಬ್ಬು—ಮುಂತಾಗಿ."

"ಇದು ಒಂದು ಕಾರಣ ಎಂದೆ. ಬೇರೆ ಕಾರಣ ಉಂಟೇನು?" ಎಂದು ಕೇಳಿದ ಅರ್ಜುನ, ತ್ವರೆಯಾಗಿ.

"ಇದೆ" ಎಂದ ಅಗ್ನಿ. ಆಹಾರದ ಬಗ್ಗೆಯೇ ಯೋಚಿಸುತ್ತಿದ್ದವನಿಗೆ ಆ ವಿಷಯವನ್ನು ಬಿಟ್ಟು ಬೇರೆ ಹೇಳಲು ಕಷ್ಟವಾಯಿತು. "ಈ ಖಾಂಡವ ವನ ಆಕಾಶ ದೇವತೆಗಳಿಗೆ ರಾಜನಾದ ಇಂದ್ರನ ಸಾಮ್ರಾಜ್ಯದ ಒಂದು ಭಾಗದಲ್ಲಿ ಗಡಿಯ ಕಾವಲುಕಟ್ಟೆಯಾಗಿದೆ. ಇಂದ್ರ ಸ್ವತಃ ಮಹಾಬಲಶಾಲಿ. ಮೇಲಾಗಿ ಅಸಂಖ್ಯ ದೇವತೆಗಳು ಅವನ ಆಜ್ಞೆ ಕಾಯುತ್ತ ನಿಂತಿರುತ್ತಾರೆ. ಇಷ್ಟಾದರೂ ಆತನಿಗೆ ಸದಾ ರಕ್ಷಣೆಯ ಚಿಂತೆ ಏಕೆ ಕಾಡುತ್ತದೆಯೋ ನನಗೆ ಅರ್ಥವಾಗುವುದಿಲ್ಲ. ಸ್ವರ್ಗ ಮರ್ತ್ಯಗಳೆರಡರಲ್ಲೂ ಯಾರು ತನ್ನ ಮೇಲೆ ದಂಗೆಯೆದ್ದಾರು, ಯಾರು ತನ್ನ ಸ್ಥಾನವನ್ನು ಅಪಹರಿಸಿಯಾರು ಎಂದು ಕಣ್ಣಾಡಿಸುತ್ತಲೇ ಇರುತ್ತಾನೆ. ಯಾವ ಮೂಲೆಯಲ್ಲಿ ನೋಡಿದರೂ ಅವನಿಗೆ ಶತ್ರುಗಳೇ ಕಾಣುತ್ತಾರೆ."

"ಹಾಗಾದರೆ, ಖಾಂಡವ ವನದಲ್ಲಿ ಇಂದ್ರ ಮಿತ್ರರನ್ನೂ ರಕ್ಷಕದಳವನ್ನೂ ಇಟ್ಟಿದ್ದಾನೆ ಎನ್ನುತ್ತೀಯಾ?" ಕೃಷ್ಣ ಕೇಳಿದ.

"ಹೌದು: ಅವರಿಗೆಲ್ಲ ನಾಯಕ ಯಾರು ಗೊತ್ತೆ? ತಕ್ಷಕ"

"ಏನು?" ಅರ್ಜುನ ಆಶ್ಚರ್ಯಪಟ್ಟ. "ಸರ್ಪರಾಜನಾದ ತಕ್ಷಕ ಬೇಹುಗಾರಿಕೆ ಮಾಡುವಂಥ ಈ ದರ್ಜೆಗೆ ಇಳಿದನೆ?"

ಅಗ್ನಿ ಹೇಳಿದ: "ಸ್ವತಃ ಅವನೇ ಬೇಹುಗಾರಿಕೆ ಮಾಡುವುದಿಲ್ಲ. ಅವನ ಬಗ್ಗೆ ನನ್ನ ಆಕ್ಷೇಪವಿಲ್ಲ. ನಮ್ಮ ನಮ್ಮ ದಾರಿ ಬೇರೆಯೇ. ಆದರೆ ಕಾಡಿನಲ್ಲಿರುವ ಅವನ ಸರ್ಪಸೇನೆಗೆ ಆತನಿಗಿರುವ ನ್ಯಾಯ ಬುದ್ಧಿ ಇಲ್ಲ. ಅಷ್ಟೇ ಅಲ್ಲದೆ ಅಲ್ಲಿ, ದೈತ್ಯದಾನವರು ಭೂತ ಭೇತಾಳಗಳು ಮುಂತಾದ ದುಷ್ಟ ಶಕ್ತಿಗಳೆಲ್ಲ ವಾಸವಾಗಿವೆ. ಅಲ್ಲಿ ರಕ್ತ ಬೀಜರು ರಕ್ಷ ಗುಹ್ಯಕರು ಕುಬ್ಜರು



ಕಬಂಧರು ನರಭಕ್ಷಕರು ಎಲ್ಲರೂ ಇದ್ದಾರೆ ಮತ್ತು ಅಲ್ಲಿ, ಚಿತ್ರ ವಿಚಿತ್ರ ಪಕ್ಷಿಗಳು ಹಿಂಸ್ರ ಮೃಗಗಳು ಕ್ರೂರ ಪ್ರಾಣಿಗಳು ಎಲ್ಲ ಸೇರಿಕೊಂಡಿವೆ. ಜನ ಕತ್ತಲಾದ ಮೇಲೆ ಮನೆಬಿಟ್ಟು ಹೊರಡುವಂತಿಲ್ಲ, ಮಕ್ಕಳನ್ನು ಈ ಪ್ರಾಣಿಗಳು ಎಲ್ಲಿ ಕೊಂಡೊಯ್ಯುತ್ತವೋ ಎಂಬ ಹೆದರಿಕೆ ರಾತ್ರಿ ಇಡೀ ಕಾಡಿನ ಗರ್ಭದಿಂದ ವಿಲಕ್ಷಣವಾದ ಭಯಾನಕ ಸ್ವರಗಳು ಕೇಳುತ್ತಿರುತ್ತವೆ. ದೊಡ್ಡವರಾದ ಸ್ತ್ರೀ ಪುರುಷರು ಕೂಡ ಈ ಸ್ವರಗಳಿಂದ ಭೀತರಾಗಿ ನಿದ್ರೆಯಿಲ್ಲದೆ ನಡುಗುತ್ತ ಮಲಗುತ್ತಾರೆ. ಇದಕ್ಕೆ ಏನಾದರೂ ಮಾಡಲೇಬೇಕು. ಕಾಡನ್ನು ನಿರ್ನಾಮ ಮಾಡಲೇಬೇಕಾಗಿದೆ."

"ಈ ಮಹಾ ವನವನ್ನು ಸಂಪೂರ್ಣವಾಗಿ ಕಬಳಿಸಬಲ್ಲೆನೆಂಬ ಧೈರ್ಯವುಂಟೆ?" ಅರ್ಜುನ ಸಂದೇಹದಿಂದಲೇ ಪ್ರಶ್ನಿಸಿದ.

ಅಗ್ನಿ ನಾಲಗೆ ನೆಕ್ಕುತ್ತ ಹೇಳಿದ: "ಓಹೋ. ಆದರೆ ನನಗೆ ಸಹಾಯ ಮಾಡುವವರು ಬೇಕು. ಈ ಮೊದಲು ನಾನು ಏಕಾಂಗಿಯಾಗಿ ಏಳು ಸಲ ಪ್ರಯತ್ನಿಸಿದೆ. ಆದರೆ ಪ್ರಾರಂಭಿಸುವಷ್ಟರಲ್ಲೇ ಸೋತುಹೋದೆ. ಸ್ವತಃ ಇಂದ್ರನೇ ಸ್ವರ್ಗದೇವತೆಗಳನ್ನು ಕೂಡಿಕೊಂಡು ಈ ವನವನ್ನು ರಕ್ಷಿಸುತ್ತಿದ್ದಾನೆ. ನಾನು ಹತಾಶನಾಗಿ ಬ್ರಹ್ಮನ ಬಳಿಗೆ ಹೋದೆ. ಆತ, "ಹೋಗಿ ಕೃಷ್ಣಾರ್ಜುನರ ಸಹಾಯ ಕೇಳು" ಎಂದ. ನೀವು ನೆರವಾಗಬಲ್ಲಿರಾ?"

ಅರ್ಜುನನೇ ನಿಶ್ಚಯ ಹೇಳಲಿ ಎಂದು ಕೃಷ್ಣ ಸುಮ್ಮನಿದ್ದ. ಖಾಂಡವ ವನ ಆತನ ರಾಜ್ಯದ ಭಾಗವೇ ಆಗಿತ್ತು.



"ಆಗಲಿ, ನಾವು ನೆರವಾಗುತ್ತೇವೆ" ಎಂದ ಅರ್ಜುನ. ಸ್ವಲ್ಪ ಕಾಲ ಯೋಚನೆ ಮಾಡಿ, "ಆದರೆ, ನಮಗೆ ಶಸ್ತ್ರಾಸ್ತ್ರಗಳು ಬೇಕು. ಈಗ ನನ್ನಲ್ಲಿರುವ ಬಿಲ್ಲಿಗಿಂತ ಮಹತ್ತರವಾದ ಒಂದು ಬಿಲ್ಲು ಬೇಕು. ಅಸಂಖ್ಯಾತ ಬಾಣಗಳು ಬೇಕು. ಇವನ್ನೆಲ್ಲ ಕೊಂಡೊಯ್ಯಲು ರಥವೂ ಅಗತ್ಯ. ಆ ರಥಕ್ಕೆ ಶುದ್ಧ ಬಿಳಿಯದಾದ ಜಾತ್ಯಶ್ವಗಳನ್ನು ಕಟ್ಟಿರಬೇಕು. ಆ ಅಶ್ವಗಳು ವಾಯುವೇಗಕ್ಕಿಂತ ಹೆಚ್ಚಿನ ವೇಗದಲ್ಲಿ ಓಡುವಂತಿರಬೇಕು. ಅವು ಓಡುವಾಗ ರಥದ ಚಕ್ರಗಳು ತಿರುಗುವ ವೇಗಕ್ಕೆ ಮೋಡಗಳು





ಗಾವುದ ಗಾವುದ ಚದುರಿ ಹೋಗುವಂತಿರಬೇಕು. ಕೃಷ್ಣನಿಗೂ ಕೆಲವು ಶಸ್ತ್ರಾಸ್ತ್ರಗಳು ಬೇಕಾಗುತ್ತವೆ. ನೀನು ನಮಗೆ ಈ ಎಲ್ಲ ಶಸ್ತ್ರಾಸ್ತ್ರಗಳನ್ನು ಒದಗಿಸಿಕೊಡಲು ಸಿದ್ಧನಾಗಿದ್ದರೆ, ನಾವು ನಿನಗೆ ನೆರವಾಗುತ್ತೇವೆ. ಖಾಂಡವ ವನವನ್ನು ಯಾವುದೇ ತಡೆಯಿಲ್ಲದೆ ಸುಪಕ್ವಭೋಜನದಂತೆ ನೀನು ಭುಂಜಿಸಬಹುದು."

"ಕೃಷ್ಣನಿಗೆ ಬೇಕಾದ್ದು ಕೇವಲ ಚಕ್ರ" ಎಂದ ಅಗ್ನಿ. "ಅದನ್ನು ಅವನಿಗೆ ನಾನೇ ಕೊಡುತ್ತೇನೆ. ಅರ್ಜುನಾ, ಇನ್ನು ನಿನಗೆ ಬೇಕಾದ ಶಸ್ತ್ರಾಸ್ತ್ರವೆಲ್ಲವನ್ನೂ ಒದಗಿಸಿಕೊಡುವಂತೆ ನಾನು ವರುಣನಿಗೆ ಹೇಳುತ್ತೇನೆ."

ಕೃಷ್ಣನಿಗೆ ಚಕ್ರ ದೊರಕಿತು. ಅದು ಚೂಪಾದ ಹಲ್ಲುಗಳಿಂದ ಹೊಳೆಯುತ್ತಿತ್ತು. ಅದರ ಮಧ್ಯೆ ಇದ್ದ ತೂತಿನಲ್ಲಿ ಕೃಷ್ಣನ ಬಲಗೈ ಹೆಬ್ಬೆರಳು ಸರಿಯಾಗಿ ಕೂತುಕೊಳ್ಳುವಂತಿತ್ತು. ಅವನು ಅದನ್ನು ತಿರುಗಿಸಿ ಎಸೆದರೆ ಅದು ಮಿಂಚಿನಂತೆ ಸದ್ದಿಲ್ಲದೆ ಜಿಗಿದು ಹೋಗಿ ವೈರಿಯ ತಲೆಯನ್ನು ಗೊತ್ತಾಗದಂತೆ ಕತ್ತರಿಸಿ, ಪುನಃ ಹಿಂದಕ್ಕೆ ಬಂದು ಕೈಗೆ ಸೇರಿಕೊಳ್ಳುವಹಾಗಿತ್ತು.

ಅರ್ಜುನ ವರುಣನ ಅದ್ಭುತವಾದ ಧನುಸ್ಸನ್ನು ಪಡೆದ. ಜತೆಗೆ ಒಂದು ವಿಚಿತ್ರವಾದ ಬತ್ತಳಿಕೆಯು ದೊರಕಿತು. ಆ ಬತ್ತಳಿಕೆಯಿಂದ ಒಂದು ಬಾಣವನ್ನು ಎತ್ತಿಕೊಳ್ಳುವಷ್ಟರಲ್ಲಿ ಅದರ ಜಾಗಕ್ಕೆ ಮಾಯಕದಿಂದ ಇನ್ನೊಂದು ಬಾಣ ಬಂದು ಕೂಡುತ್ತಿತ್ತು. ಜಗತ್ತನ್ನೇ ನಿರ್ಮಿಸಿದಂಥ ವಿಶ್ವಕರ್ಮನಿಂದ ನಿರ್ಮಾಣಗೊಂಡ ಒಂದು ರಥವೂ ಆತನಿಗೆ ದೊರಕಿತು. ರಥಕ್ಕೆ ಅಚ್ಚ ಬಿಳಿಯದಾದ ಜಾತ್ಯಶ್ವಗಳನ್ನು ಕಟ್ಟಿತ್ತು. ಅವಕ್ಕೆ ಬಂಗಾರದ ಕವಚ ತೊಡಿಸಿತ್ತು. ಅವು ಆಕಾಶದಲ್ಲಿ ಮಿಂಚಿನಂತೆ ಚಲಿಸುತ್ತಿದ್ದವು. ಜೊತೆಯಲ್ಲಿ ವರುಣದೇವ ಅರ್ಜುನನಿಗೆ ಒಂದು ದೊಡ್ಡ ಚಮ್ಮಟಿಗೆಯನ್ನು ಕೊಟ್ಟ. ಅದನ್ನು ಎತ್ತಿ ಬೀಸಿದರೆ, ಗುಡುಗಿನಂತೆ ಸದ್ದಾಗುತ್ತಿತ್ತು.

ಅರ್ಜುನ ಯುದ್ಧಕವಚ ತೊಟ್ಟು ಒರೆಗಿಕ್ಕಿದ ಕತ್ತಿಯನ್ನು ಸಿಕ್ಕಿಸಿಕೊಂಡು ಮೃದು ಚರ್ಮದ ಹಸ್ತರಕ್ಷೆಗಳನ್ನು ಕೈಗಿಟ್ಟುಕೊಂಡ, ಧನುವನ್ನೇರಿಸಿಕೊಂಡ. ರಥವನ್ನು ಒಮ್ಮೆ ಪರೀಕ್ಷಿಸಿದ. ಆಮೇಲೆ ಅಗ್ನಿಗೆ ಹೇಳಿದ:

"ನಾವೀಗ ಸಿದ್ಧರಾಗಿದ್ದೇವೆ. ಈಗ ಹೋಗಿ ಖಾಂಡವ ವನವನ್ನು ಆಕ್ರಮಿಸು. ಕೃಷ್ಣ ಮತ್ತು ನಾನು ಸರಿಯಾದ ಸ್ಥಳದಲ್ಲಿ ನಿಲ್ಲುತ್ತೇವೆ. ಇಗೋ, ಆಶ್ವಾಸನೆ ಕೊಡುತ್ತೇವೆ. ಖಾಂಡವ ವನವನ್ನು ಭುಂಜಿಸು."

ಅಗ್ನಿದೇವ ಸುಂಯ್‌ಗುಟ್ಟುತ್ತ ಖಾಂಡವ ವನವನ್ನು ಸುತ್ತಿ ಬಳಸಲಾರಂಭಿಸಿದ. ಕೃಷ್ಣಾರ್ಜುನರು ಆಕಾಶಕ್ಕೆ ಜಿಗಿದು ಆ ವನದ ನಿಬಿಡವಾದ ಹಸಿರಿನ ಮೇಲುಭಾಗದಲ್ಲಿ ಕಾವಲುನಿಂತರು.



ನೂರಾರು ಬಗೆಯ ಜೀವಂತ ಪ್ರಾಣಿಗಳು—ದೊಡ್ಡವೂ ಚಿಕ್ಕವೂ ವಿವಿಧ ಆಕಾರಗಳುಳ್ಳವು, ವಿವಿಧ ಗಾತ್ರದವು, ಬಗೆಬಗೆಯ ಬಣ್ಣದವು ಎಲ್ಲವೂ—ಆಗಲೇ ಬೆಂಕಿಯ ವಾಸನೆ ಬಂದು, ಅಲ್ಲಿಂದ ತಪ್ಪಿಸಿಕೊಂಡು ಹೋಗಲು ಹಾದಿ ಹುಡುಕುತ್ತಿದ್ದವು. ಭಾರೀ ತಲಯವು, ಬಲೆ ಬಲೆಯಾದ ಕಾಲುಗಳುಳ್ಳವು, ಒಂದೇ ಕಣ್ಣು ಇರುವಂಥವು, ಹೊರಪು ರಕ್ಕೆಯುಳ್ಳವು, ಉದ್ದ ಉಗುರುಳ್ಳವು—ಹೀಗೆ ವಿಲಕ್ಷಣವಾದ ಅಸಂಖ್ಯಾತ ಪ್ರಾಣಿಗಳು! ಅವುಗಳಲ್ಲಿ ಕೆಲವು ಹೆದರಿ ಹುಚ್ಚಾಗಿ ನೇರ ಬೆಂಕಿಗೇ ಹೋಗಿ ಹಾರಿದವು. ಮೈಗೆ ಬೆಂಕಿ ತಾಗಿ ಪಂಜಿನಂತೆ ಉರಿಯತೊಡಗಿದಾಗ ಹುಲ್ಲಿನ ಮೇಲೆ ಬಿದ್ದು ಬೆಂಕಿ ಆರಿಸಲಿಕ್ಕಾಗಿ ಹೊರಳಿದವು. ಆದರೆ, ಬೆಂಕಿ ಮತ್ತೂ ಮತ್ತೂ ವಿಸ್ತಾರವಾಗುತ್ತ ಕಾಡಿನಲ್ಲಿ ದಿಕ್ಕು ದಿಕ್ಕಿಗೆ ನಾಲಗೆ ಚಾಚುತ್ತ ಬರುತ್ತಿತ್ತು. ಪುನಃ ಅದಕ್ಕ ಸಿಕ್ಕಿ ಭಯಾನಕವಾಗಿ ಅರಚುತ್ತ ಪ್ರಾಣಬಿಟ್ಟವು.



ವಿಸ್ತಾರವಾದ ರೆಕ್ಕೆಗಳಿದ್ದ ಕೆಲವು ವಿಲಕ್ಷಣ ಪಕ್ಷಿಗಳು ಕಪ್ಪು ಮೋಡಗಳ ಹಾಗೆ ಆಕಾಶದಲ್ಲಿ ಸುತ್ತ ತೊಡಗಿದ್ದವು. ಕೃಷ್ಣಾರ್ಜುನರ ಬಾಣಗಳು ಅವನ್ನೆಲ್ಲ ಒಂದೇಸಮ ಕುಕ್ಕಿ ಕೆಳಕ್ಕೆ ಬೆಂಕಿಗೆ ಕೆಡವುತ್ತಿದ್ದವು; ಕಣ್ಣು ಮುಚ್ಚಿ ತೆರೆಯುವುದರೊಳಗೆ ಅವು ಹೊಗೆಯಾಡುವ ಮಾಂಸದ ಮುದ್ದೆಗಳಾಗಿರುತ್ತಿದ್ದವು. ಕಾಡಿನ ಆಳದಲ್ಲಿ, ಬೆಂಕಿಯ ಜ್ವಾಲೆ ಅಗಲಗಲಕ್ಕೆ ಹಬ್ಬುತ್ತ ಬಾಯಿ ತೆರೆದು ತೀರ ತೀರ ಸಮೀಪಕ್ಕೆ ಬರುತ್ತಿದ್ದುದನ್ನು ಕಂಡ ಅಸಂಖ್ಯಾತ ಮೃಗಗಳು ಬಿಟ್ಟ ಕಣ್ಣು ಮುಚ್ಚದೆ ಭಯತ್ರಸ್ತವಾಗಿ ನಿಂತುಬಿಟ್ಟಿದ್ದವು. ಸರ್ಪಗಳು ಹುಲ್ಲಿನಲ್ಲಿ ಅವಿತುಕೊಳ್ಳಲು ಹರಿಯುತ್ತಿದ್ದವು. ಆದರೆ ಅಷ್ಟರಲ್ಲಿ ಸದಾ ಜಾಗೃತವಾಗಿದ್ದ ಅಗ್ನಿ ಆ ಹುಲ್ಲನ್ನೇ ಉರಿಸಿ ಅವನ್ನು ಕೊಲ್ಲುತ್ತಿತ್ತು.

ಬೆಂಕಿಯ ಪ್ರಖರ ತಾಪಕ್ಕೆ ಕಾಡಿನ ಕೆರೆಕೊಳಗಳು ಕುದಿಯ ತೊಡಗಿದವು. ಮೀನುಗಳು ರಾಶಿ ರಾಶಿಯಾಗಿ ಸತ್ತು ನೀರಿನ ಮೇಲೆ ತೇಲತೊಡಗಿದವು.

ಬೇಯುವ ಮಾಂಸದ ದುರ್ಗಂಧ ಕಾಡನ್ನೆಲ್ಲ ಆವರಿಸಿ ಬಿಟ್ಟಿತ್ತು. ಅಕ್ಕಪಕ್ಕದ ಊರುಗಳಲ್ಲಿದ್ದ ಜನ ಈ ಬೇಯುವ ದೃಶ್ಯ ಶಬ್ದ ವಾಸನೆಗಳನ್ನು ಸಹಿಸಲಾಗದೆ ಮನೆಬಿಟ್ಟು ಓಡ ತೊಡಗಿದರು.

ಆಕಾಶ ದೇವತೆಗಳು ಕೊಂಚ ಹೊತ್ತು ನಿಬ್ಬೆರಗಾಗಿ ನೋಡುತ್ತ ನಿಂತರು. ಆಮೇಲೆ ಗುಂಪು ಗೂಡಿಕೊಂಡು ತಮ್ಮ ರಾಜನಾದ ಇಂದ್ರನ ಬಳಿಗೆ ಧಾವಿಸಿದರು. ಇಂದ್ರ ಕೋಪದಿಂದ ಉದ್ರಿಕ್ತನಾಗಿದ್ದ.

"ಏನು?" ಎಂದು ಆತ ಗರ್ಜಿಸಿದ. "ಘೃತ ಭಕ್ಷಕನಾದ ಆ ಮೂರ್ಖ ಅಗ್ನಿ ಖಾಂಡವ ವನದಲ್ಲಿಯ ನನ್ನ ಭದ್ರ ನೆಲೆಯನ್ನು ಆಕ್ರಮಿಸುವ ಧೈರ್ಯ ಮಾಡಿದನೆ? ತಕ್ಷಕ ಮತ್ತು ನಾನು ಕೂಡಿ ಅವನಿಗೆ ಎಂದೆಂದಿಗೂ ಮರೆಯಲಾಗದಂಥ ಪಾಠ ಕಲಿಸುತ್ತೇವೆ."

"ಪ್ರಭೂ, ತಮಗೆ ನೆನಪಿಲ್ಲವೆ?" ದೇವತೆಗಳಲ್ಲೊಬ್ಬ ಹೇಳಿದ. "ತಕ್ಷಕ ಈಗ ಖಾಂಡವ ವನದಲ್ಲಿಲ್ಲ. ಅವನಿನ್ನೂ ಕುರುಕ್ಷೇತ್ರದಿಂದ ಹಿಂದಿರುಗಿಲ್ಲ. ಅಲ್ಲದೆ ಅವನೇ ಅಲ್ಲಿ ಇದ್ದಿದ್ದರೂ ಖಾಂಡವ ವನವನ್ನು ರಕ್ಷಿಸುವುದು ಕಷ್ಟವಿತ್ತು."

"ಕಷ್ಟ ಏತಕ್ಕಾಗಿ?"

"ಏಕೆಂದರೆ ಅಗ್ನಿ ಏಕಾಂಗಿಯಲ್ಲ. ಕೃಷ್ಣಾರ್ಜುನರು ಆತನಿಗೆ ನೆರವಾಗುತ್ತಿದ್ದಾರೆ. ಈ ಕ್ಷಣದಲ್ಲಿ ಅವರ ರಥ, ಉರಿಯುತ್ತಿರುವ ಕಾಡಿನ ಮೇಲು ಭಾಗದಲ್ಲೇ ಸ್ಥಾಪಿತವಾಗಿಬಿಟ್ಟಿದೆ."

ಇದನ್ನು ಕೇಳಿ ಇಂದ್ರ ಕ್ಷಣಕಾಲ ಮೌನನಾದ. ಕೃಷ್ಣಾರ್ಜುನರಾದರೋ ಪ್ರಖ್ಯಾತ ವೀರರು; ಅಜೇಯರೆಂದು ಹೆಸರಾದವರು. ಆದರೆ ದೇವರಾಜನಾದ ಇಂದ್ರನ ಉದ್ಧಟತನವಾದರೂ ಕಡಿಮೆಯಲ್ಲ. ಆತ ಒಂದೇ ಏಟಿಗೆ ಎರಡು ಪಕ್ಷಿಗಳನ್ನು ಉರುಳಿಸುವುದಾಗಿ

ಯೋಚಿಸಿದ. ಅಂದರೆ, ಕಾಡನ್ನು ರಕ್ಷಿಸುವುದು ಮತ್ತು ಅದರ ಜತೆಯಲ್ಲೇ ಕೃಷ್ಣಾರ್ಜುನರನ್ನು ಸೋಲಿಸಿ ಸಮಸ್ತ ವಿಶ್ವದಲ್ಲೇ ಅತ್ಯಂತ ಶ್ರೇಷ್ಠನಾದ ಏಕೈಕವೀರನೆಂದು ಹೆಸರು ಪಡೆಯುವುದು ಈ ಎರಡನ್ನು ಸಾಧಿಸಲು ಯೋಚಿಸಿದ.

ಈ ನಿರ್ಧಾರದಿಂದ ಇಂದ್ರ ಕಾರ್ಯತತ್ಪರನಾದ. ಆತ ತನ್ನ ದೇವತೆಗಳಿಗೆಲ್ಲ ಆಜ್ಞೆಮಾಡಿ, ಇಡೀ ಖಾಂಡವ ವನದ ಮೇಲ್ಭಾಗದಲ್ಲಿ ದಟ್ಟವಾದ ಮೋಡಗಳನ್ನು ಹಬ್ಬಿಸುವಂತೆ ಮಾಡಿದ; ತಾನು ಹೇಳಿದ ಕ್ಷಣದಲ್ಲಿ ಮಳೆ ಸುರಿದು ಕಾಡನ್ನು ತೊಳೆದು ಬಿಡಬೇಕು ಹಾಗೆ.

ಮೇಲೆ ಮೋಡಗಳು ಆವರಿಸಿಕೊಳ್ಳುತ್ತಿದ್ದಂತೆ ಕೃಷ್ಣಾರ್ಜುನರಿಬ್ಬರೂ ಬಾಣ ಪ್ರಯೋಗಮಾಡಲು ತೊಡಗಿದರು. ಕಾಡಿನ ಮೇಲುಭಾಗ ಮತ್ತು ಮೇಘಗಳ ಆವರಣ ಇವುಗಳ ಮಧ್ಯೆ ಒಂದರ ಪಕ್ಕದಲ್ಲೊಂದರಂತೆ ಬಾಣಗಳು ಹೆಣೆದುಕೊಳ್ಳುವಂತೆ ಮಾಡಿದರು. ಹಾಗೆ, ಮೋಡಗಳ ಕೆಳಭಾಗದಲ್ಲಿ ಬಾಣಗಳ ಒಂದು ತೆರೆಯೇ ಸಿದ್ಧವಾಗಿಬಿಟ್ಟಿತು. ಬಾಣಗಳ ಹೆಣಿಕೆ ಎಷ್ಟು ದಟ್ಟ



ವಾಗಿತ್ತೆಂದರೆ, ಅದು ಬೃಹದಾಕಾರದ ಒಂದು ಕೊಡೆಯಾಗಿ ಬಿಟ್ಟಿತು. ಮಳೆ ಸುರಿಯತೊಡಗಿದಾಗ ಒಂದು ಹನಿ ಕೂಡ ಕೆಳಕ್ಕೆ ಒಸರಲು ಅವಕಾಶವಾಗಲಿಲ್ಲ. ನೀರು ಬಾಣಗಳ ಛತ್ರಿಯ ಮೇಲೆ ಬಿದ್ದು ಕಾಡಿನ ಹೊರಕ್ಕೆ ಹೋಗಿ ಸುರಿಯುತ್ತಿತ್ತು. ಆ ಛತ್ರಿಯಿಂದ ಹೊರಗೆ ಬೀಳುವ ನೀರು ಕ್ರಮೇಣ ಒಂದು ನದಿಯಾಗಿ ಹರಿಯತೊಡಗಿತು. ಕಾಡಿನ ಪ್ರಾಣಿ ಪಕ್ಷಿಗಳೆಲ್ಲ ಇತ್ತ ಬೆಂಕಿಗೋ ಅತ್ತ ನೀರಿಗೋ ಸಿಕ್ಕು ಸತ್ತವು.

ಅನಂತರ ಇಂದ್ರ, ಮೃತ್ಯುದೇವತೆಯಾದ ಯಮ, ಐಶ್ವರ್ಯ ದೇವತೆಯಾದ ಕುಬೇರ, ಗಾಳಿಯ ದೇವನಾದ ವಾಯು ಮುಂತಾಗಿ ಅನೇಕ ದೇವತೆಗಳನ್ನು ಕೂಡಿಕೊಂಡು, ತಾನೇ ಸ್ವತಃ ತನ್ನ ಐರಾವತವನ್ನೇರಿ ಯುದ್ಧಕ್ಕೆ ಹೊರಟ. ಆದರೆ ಕೃಷ್ಣಾರ್ಜುನರು ದೇವತೆಗಳನ್ನೆಲ್ಲ ಹಿಮ್ಮೆಟ್ಟಿಸಿ ಓಡಿಸಿದರು. ಅವರು ಇಂದ್ರನನ್ನು ಕೂಡ ಹಿಂದಕ್ಕೆ ಅಟ್ಟಿದರು. ಆದರೆ ಆತ ಯುದ್ಧ ಭೂಮಿಯನ್ನು ಬಿಟ್ಟು ಓಡಿಹೋಗಿ ಪಾರಾಗಲು ಸಾಧ್ಯವಿರಲಿಲ್ಲ. ಏನೇ ಕಷ್ಟ ವಾದರೂ ಆತ ತನ್ನ ಶಪಥವನ್ನು ಉಳಿಸಿಕೊಳ್ಳಲೇಬೇಕಿತ್ತು.



ತಕ್ಷಕನ ಪತ್ನಿ ಮತ್ತು ಪುತ್ರನನ್ನು ಆತ ರಕ್ಷಿಸಲೇ ಬೇಕಿತ್ತು. ಚಿತ್ರ ವಿಚಿತ್ರವಾದ ಪಕ್ಷಿಗಳನ್ನೂ ಮೃಗ ಪ್ರಾಣಿಗಳನ್ನೂ ತಾನೇ ತುಂಬಿಸಿಟ್ಟಂಥ ಖಾಂಡವ ವನದ ರಕ್ಷಣೆಗೆ ನೀನು ನೆರವಾಗು ಎಂದು ಸರ್ಪರಾಜನಾದ ತಕ್ಷಕನನ್ನು ಬೇಡಿಕೊಂಡಾಗ, ಅವನ ಪತ್ನಿ ಪುತ್ರರನ್ನು ರಕ್ಷಿಸುವುದಾಗಿ ತಾನು ಅವನಿಗೆ ಅಭಯ ಕೊಟ್ಟು ಶಪಥ ಮಾಡಿದ್ದ.

ವನದ ಮೇಲುಭಾಗದಲ್ಲಿ ಇಂದ್ರ ಸವಾರಿ ಹೊರಟು ಬರುತ್ತಿದ್ದ ಹಾಗೇ ತಕ್ಷಕನ ಪತ್ನಿ ಬೆಂಕಿಯ ಜ್ವಾಲೆಗಳ ಮಧ್ಯದಿಂದ ಬುಸುಗುಟ್ಟುತ್ತ, ತನ್ನ ಕೋಮಲವಾದ ಹೊಳಪಿನ ಚರ್ಮ ಶಾಖಕ್ಕೆ ಕರಿಕುಗೊಳ್ಳುತ್ತಿದ್ದರೂ ಲೆಕ್ಕಿಸದೆ, ಆ ಕಡೆಗೆ ಜಿಗಿದು ಓಡಲು ಹವಣಿಸಿದಳು. ಅದ್ಭುತಳಾದ ಈ ಸರ್ಪರಾಣಿ ಆಕಾಶಕ್ಕೆ ಜಿಗಿಯುತ್ತಿದ್ದುದನ್ನು ಕಂಡ ಅರ್ಜುನ ಆಕೆಯನ್ನು ಬಾಣದಿಂದ ಹೊಡೆದು ಕೆಳಕ್ಕುರುಳಿಸಲು ಸಿದ್ಧನಾದ. ಆದರೆ ಕೃಷ್ಣ ಆತನನ್ನು ತಡೆದ. ಸರ್ಪಿಣಿಯನ್ನು ಕುರಿತು ಕಲಾಗಿ ಹೇಳಿದ: ಎಲೈ ತಕ್ಷಕನ ಪತ್ನಿಯೇ, ನಿನ್ನ ಪುತ್ರ ಎಲ್ಲಿದ್ದಾನೆ? ನನಗೆ ಆತ ಕಾಣಿಸುತ್ತಿಲ್ಲ. ಆತನನ್ನು ಕಾಡಿನಲ್ಲೇ ಸಾಯಲುಬಿಟ್ಟು ನೀನು ಮಾತ್ರ ತಪ್ಪಿಸಿಕೊಳ್ಳುತ್ತಿದ್ದೀಯಾ?"





"ನನ್ನ ಮಗ ನನ್ನ ಹೊಟ್ಟೆಯಲ್ಲಿದ್ದಾನೆ," ಎಂದಳು ತಕ್ಷಕನ ಪತ್ನಿ "ಈ ಜ್ವಾಲೆಗಳಿಂದ ಆತನನ್ನು ರಕ್ಷಿಸುವ ಸಲುವಾಗಿ ನಾನು ಅವನನ್ನು ನುಂಗಿಬಿಟ್ಟಿದ್ದೇನೆ. ನೀನು ನನ್ನನ್ನು ಕೊಂದು ಆಮೇಲೆ ಆತನನ್ನು ಪಡೆಯಬೇಕು?

ಇದನ್ನು ಕೇಳಿ ಅರ್ಜುನ ತನ್ನ ಧನುಸ್ಸನ್ನು ಕೆಡವಿಬಿಟ್ಟ.



ಖಾಂಡವ ವನ ಹದಿನೈದು ದಿನಗಳ ಪರ್ಯಂತ ಉರಿಯುತ್ತಲೇ ಇತ್ತು. ಅಗ್ನಿ ತನ್ನ ಅಸಂಖ್ಯಾತವಾದ ಉರಿನಾಲಗೆಗಳಿಂದ ರಕ್ತಮಾಂಸ ಕೊಬ್ಬುಗಳ ರಾಶಿ ರಾಶಿಯನ್ನೇ ನೆಕ್ಕಿ ನುಂಗುತ್ತ ಕೊನೆಯಲ್ಲಿ ಸಂತೃಪ್ತಿ ಪಡೆದ; ಹೀಗೆ ಇಡೀ ವನವನ್ನೇ ಕಬಳಿಸಿ ಬಳಲಿಕೆಯಾದ ಮೇಲೆ ಶಾಂತನಾದ. ಒಂದು ಕಾಲದಲ್ಲಿ ಭಯಂಕರವೂ ಚಿತ್ರವಿಚಿತ್ರವೂ ಆದ ಪ್ರಾಣಿಗಳಿಂದ ತುಂಬಿ ದಿಕ್ಕು ದಿಕ್ಕುಗಳಲ್ಲಿಯೂ ವಿಸ್ತಾರವಾಗಿ ಹಬ್ಬಿಕೊಂಡು ಅಂತ್ಯವೇ ಇಲ್ಲವೆಂಬಂತಿದ್ದ ಆ ವನ ಈಗ ಕಪ್ಪು ಬಿಳುಪಾದ ಬೂದಿ ರಾಶಿಗಳಿಂದ ಅನಂತವಾದ ಮರುಭೂಮಿಯಾಗಿ ಬಿದ್ದಿತ್ತು.



Printed at Shivam Offset Press, A-12/1 Naraina Indl. Area, Phase-I, New Delhi-110 028